ಜೀವನ ಸಾಹಿತ್ಯ ೯

# ಜೂಜು

ಮೂಲ: ಶ್ರೀಮತಿ ಮುಕ್ತಾಬಾಯಿ ದೀಕ್ಷಿತ್
ಅನುವಾದ: ಶ್ರೀ ಲಕ್ಷ್ಮಣರಾವ್ ಬೇಂದ್ರೆ

ಜೀವನ ಕಾರ್ಯಾಲಯ
ಬಸವನಗುಡಿ
ಬೆಂಗಳೂರ

ಜೀವನ ಸಾಹಿತ್ಯ ೮

# ಜೂಜು

ಮೂಲ ಶ್ರೀಮತಿ ಮುಕ್ತಾಬಾಯಿ ದೀಕ್ಷಿತ್
ಅನುವಾದ ಶ್ರೀ ಲಕ್ಷ್ಮಣರಾವ್ ಬೇಂದ್ರೆ

ಜೀವನ ಕಾರ್ಯಾಲಯ
ಬಸವನಗುಡಿ
ಬೆಂಗಳೂರು

# ಮುನ್ನುಡಿ

ಸೌ॥ ಮುಕ್ತಾಬಾಯಿ ದೀಕ್ಷಿತ್ ಇವರ ಮರಾಠಿ "ಜುಗಾರ"ವನ್ನು ಗೆ. ಲಕ್ಷ್ಮಣರಾವ ಬೇಂದ್ರೆಯವರು ಕನ್ನಡಿಸಿದರು. ಶ್ರೀ. ಪುರಾಣಿಕ ಮತ್ತು ಪೂನಾ ಕರ್ಣಾಟಕ ಸಂಘದ ಇನ್ನುಳಿದ ಮಿತ್ರರು ಪೂನಾ ರಂಗಭೂಮಿಯಲ್ಲಿಯೇ ಇದರ ಪ್ರಯೋಗವನ್ನು ಯಶಸ್ವಿಯಾಗಿ ಮಾಡಿದರು. ಅಣ್ಣಾ ಮಾಸ್ತಿಯವರು "ಜೂಜು"ವನ್ನು ತಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸುತ್ತಿದ್ದಾರೆ. ನಾನು ಈ ನಾಟಕಕ್ಕೆ ಒಂದು ಮುನ್ನುಡಿ ಬರೆಯುತ್ತಿದ್ದೇನೆ. ನಾವೀ ಜನರೆಲ್ಲರೂ ದೀಕ್ಷಿತ ದಂಪತಿಗಳ ಮಿತ್ರವರ್ಗಕ್ಕೆ ಸೇರಿದವರು ಎಂದು ತಿಳಿಸಿದರೆ ತಪ್ಪಾಗಲಾರದು. ಇದೇ ಬಗೆಯ ಮೈತ್ರಿಯ ಅನಸೂಯ ವಿಶ್ವಬಾಂಧವ್ಯದ ಮೂಲಕ ಅವರ ನಾಟಕ ಹಿಂದೀ ರೂಪಾಂತರಗೊಂಡು, ದಿಲ್ಲಿ ರಾಜಧಾನಿಯಲ್ಲಿ, ವಿದ್ಯಾಕಲಾಧಿಕಾರಿಗಳ ಸಮಕ್ಷದಲ್ಲಿ ಪ್ರಯೋಗ ಸಿದ್ಧಿಯಿಂದ ಕೀರ್ತಿ ಪಡೆಯಿತು. ಆ ನಾಟಕದ ಗುಜರಾತಿ, ಇಂಗ್ಲಿಷ್ ಭಾಷಾಂತರಗಳೂ ಸಿದ್ಧವಾಗಿವೆ. ಮಹಾರಾಷ್ಟ್ರದಲ್ಲಿ ಅದು ಪಡೆದ ಖ್ಯಾತಿಯು ಅದ್ವಿತೀಯವಾಗಿದೆ. ಈ ಖ್ಯಾತಿಗೆ ಕಾರಣರು ಅವರೊಬ್ಬರೆ ಅಲ್ಲ. ಅವರಿಬ್ಬರೇ (ದೀಕ್ಷಿತ ದಂಪತಿಗಳು) ಕಾರಣರೂ ಅಲ್ಲ. ಅದರ ಸೂತ್ರಧಾರ ದಿಗ್ದರ್ಶಕರಾದ ನಟವರ್ಯ ದಾತೆ ಕೇಶವರಾಯರೂ ಅವರ ಶಿಕ್ಷಣದಿಂದ ತಯಾರಾದ ನಟವರ್ಗದವರೂ ಈ ಕಾರ್ಯದಲ್ಲಿ ಸಹಕಾರಿಗಳಾಗಿದ್ದರು. ಮಹಾರಾಷ್ಟ್ರೀಯ ಸಮೀಕ್ಷಕರೂ ಸಹೃದಯರೂ ಇದರ ಸಾಹಿತ್ಯಸ್ವರೂಪದ ಅಭಿನವತೆಯನ್ನು ಮನಃಪೂರ್ವಕವಾಗಿ ಸ್ವಾಗತಿಸಿದರು. ಅಂತೂ ಏನು? ನಾಟ್ಯ-ಸಿದ್ಧಿಗೆ ಅನೇಕಾಂಗಗಳ ಹಾರ್ದಿಕ ಸಹಕಾರ ಬೇಕಾಗುವುದು. ಕನ್ನಡ "ಜೂಜು" ಕೂಡ ಅಂಥ ಸವಿಯಾದ ಸಹಕಾರ್ಯದಿಂದಲೇ ಪಟ್ಟಿಡಿಯಿಡುತ್ತಿದೆ.

ಕನ್ನಡದ ಈ ಸಹಕಾರವು ಮರಾಠಿಯ ಮೂಲದಲ್ಲಿಯೇ ಇದ್ದಿತು. ಸೌ॥ ಮುಕ್ತಾಬಾಯಿಯವರ ನಾಟ್ಯನಿರ್ಮಿತಿಯ ವಿವಿಧಾವಸ್ಥೆಗಳಲ್ಲಿ

ಸಾಕ್ಷಿಕನಾಗಿ ಸಹಕರಿಸುವ ಭಾಗ್ಯ ನನ್ನದಾಗಿತ್ತು. ಅದರ ಕಿಂಚಿತ್ ಉಲ್ಲೇಖವನ್ನು ಅವರೇ ತಮ್ಮ ಪ್ರಸ್ತಾವನೆಯಲ್ಲಿ ಮಾಡಿದ್ದರು. "ನನ್ನ ಹರಣ—ನಿನಗೆ ಶರಣ" ಎಂಬ ನನ್ನ ಕನ್ನಡ ಭಾವಗೀತದ ಮರಾಠಿ ಅನುವಾದವನ್ನು ಅವರು ತಮ್ಮ ಮರಾಠಿ ನಾಟಕಕ್ಕೆ ನಾಂದಿಪದ್ಯವಾಗಿ ಉಪಯೋಗಿಸಿದ್ದಾರೆ. ನನ್ನೊಬ್ಬ ತರುಣಮಿತ್ರರು ಚೈತನ್ಯದೇವ ಇವರು ಈ ನಾಟಕ ಪ್ರಯೋಗದಲ್ಲಿ ಸಹಕರಿಸುವರೆಂಬ ಭರವಸೆಯಿಂದಲೇ ನಾಟ್ಯ ಕಥೆಯಲ್ಲಿಯೇ 'ಚೈತನ್ಯ' ಎಂಬ ಪಾತ್ರವನ್ನು ನಿರ್ಮಿಸಿತ್ತು. ಚೈತನ್ಯ ಇವರು ಮೈಸೂರವರು. ನಾಟ್ಯಪ್ರಯೋಗದ ಕಾಲಕ್ಕೆಮಾತ್ರ ಕರ್ಣಾಟಕದ ಸುಪ್ರಸಿದ್ಧ ಗಾಯಕರಾದ ಶ್ರೀ. ಭೀಮಸೇನ ಜೋಶಿಯವರು ಈ ಪಾತ್ರವನ್ನು ವಹಿಸಿದರು. ಇವರ ಪ್ರಥಮ ಪ್ರಯೋಗದಕಾಲಕ್ಕೆ ಧಾರವಾಡದ ಕಲೋಪಾಸಕ ಮಂಡಲದ ಪ್ರತಿನಿಧಿಗಳೆಂದು ಶ್ರೀ. ಬೇಂದ್ರೆ ಲಕ್ಷ್ಮಣರಾಯರು ಪೂನಾಕ್ಕೆ ಬಂದಿದ್ದರು. ಅಂತರ್ಭಾರತೀಯ ಉದ್ಘಾಟನಕ್ಕಾಗಿಯೂ, ಭಾಷಾ ಸಮ್ಮೇಲನದ ಸಮಾರಂಭಕ್ಕಾಗಿಯೂ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರವರು ಪೂನಾಕ್ಕೆ ಬಂದಾಗ್ಗೆ ದೀಕ್ಷಿತ ದಂಪತಿಗಳ ಆದರಾತಿಥ್ಯವನ್ನು ಪಡೆದಾಗಲೇ "ಜುಗಾರ"ದ ವಿಷಯವನ್ನು ಸೌ॥ ಮುಕ್ತಾ ಬಾಯಿಯವರಿಂದ ಕೇಳಿ ತಿಳಿದುಕೊಂಡು ಆ ನಾಟಕದ ಬಗ್ಗೆ ಅವರು ಹಿಗ್ಗಿ ಮಾತನಾಡಿದ್ದರು. ಅದೆಲ್ಲಾ ಈಗ ಮತ್ತೆ ಏಕೀಭವಿಸಿ, ಈ ನಾಟಕ ಪುಸ್ತಕ ರೂಪದಲ್ಲಿ ಬರುತ್ತಿದೆ. ನಾನು ಈ ನಾಟಕವು ಮರಾಠಿಯಲ್ಲಿ ಪ್ರಕಟವಾದಾಗಲೇ ಇದರ ವಿಷಯವಾಗಿ ಸಮೀಕ್ಷಣಾತ್ಮಕವಾಗಿ ಬರೆಯ ಬೇಕಾಗಿದ್ದ ಕೆಲ ಮಾತುಗಳಲ್ಲಿ ಒಂದೆರಡನ್ನು ಈ ಮುನ್ನುಡಿಯಲ್ಲಿ ಕಾಣಿಸುತ್ತೇನೆ. ಈ ನಾಟ್ಯವಸ್ತುವಿನಲ್ಲಿ ದೈವ ಒಡ್ಡಿದ ಕರ್ಮಸೇನಾವ್ಯೂಹವನ್ನು ಮೊದಲು ನೋಡೋಣ :—

ಇಲ್ಲೀ ಕತೆಯಲ್ಲಿ, ಡಾ. ವಸಂತರಾಯ ಮತ್ತು ಉಷಾ ಇವರ ಪರಸ್ಪರ ಸ್ನೇಹ ಬೆಳೆದು ಸಹಜವಾಗಿಯೇ ಪಾಕಗೊಂಡ, ಸ್ವಾಭಾವಿಕ ರತಿಯ ಉತ್ಕಟತೆಯ ಮೂಲಕ, ಬೇಗನೆ ತಮ್ಮಿಬ್ಬರ ಲಗ್ನವಾಗದಿದ್ದರೆ ಇಬ್ಬರೂ ಗೌರವದಿಂದ ಬಾಳಲಾರರು ಎಂಬ ತೊಡಕಿನಲ್ಲಿ ಅವರು ಸಿಕ್ಕುತ್ತಾರೆ. ಡಾ. ವಸಂತರಾಯನಿಗೆ ಲಗ್ನದ ಹೆಂಡತಿ ಇದ್ದಾಳೆ. ಇನ್ನೂ ಮಕ್ಕಳಾಗಿಲ್ಲ.

ಆದರೂ ಆಕೆಯು ಒಳ್ಳೆಯ ಹುಡುಗಿ. ಹೌದು. ಮುಂದೇನು? ಉಷೆಯೂ ಒಳ್ಳೆಯ ಹುಡುಗಿ! ಬರ್ಮಾ ದೇಶದ ರಾಜಕೀಯ ವಿಪ್ಲವದಲ್ಲಿ ಆಪ್ತೇಷ್ಟರನ್ನೆಲ್ಲಾ ಕಳೆದುಕೊಂಡು, ಹಾಗೂ ಹೀಗೂ ಜೀವ ಮಾನ ಉಳಿಸಿಕೊಂಡು, ದಕ್ಷಿಣ ದೇಶದ ಒಬ್ಬ ಅಜ್ಜಯ್ಯನೊಡನೆ, ದೇಶ - ದೇಶ ದಾಟಿ ಬಂದು ಆಕೆ ಮುಂಬೈ ಪಟ್ಟಣ ಸೇರಿಕೊಳ್ಳುತ್ತಾಳೆ. ಮುಂದೆ ಕೆಲ ದಿನದಲ್ಲಿ ಆಕೆ ಕಾಹಿಲೆ ಬಿದ್ದು, ಡಾ. ವಸಂತರಾಯರ ಔಷಧೋಪಚಾರ ಪಡೆಯುವಾಗ ಆರೋಗ್ಯದೊಡನೆ ಒಬ್ಬ ಮೋಹಿಯಾದ ಪ್ರಿಯನನ್ನು ಪಡೆಯುತ್ತಾಳೆ. ಪಾಪ, ಅವಳಿಗೆ ಗೊತ್ತಿಲ್ಲ ಆವನು ಮದುವೆಯಾದವನೆಂದು. ಮುಂದೆ ಅದು ತಿಳಿದಮೇಲೆ, ಅವಳು ಹಿಂದಿರುಗುವಂತಿರಲಿಲ್ಲ. ಇಂತಹ ಪೀಕಲಾಟದಲ್ಲಿದ್ದಾಗ, "ದ್ವಿತೀಯ ಭಾರ್ಯಾಬಂಧಕ" ಕಟ್ಟಳೆಯ ಕ್ಲಿಪ್ತಕಾಲ ಬೇರೆ ಮೈಮೇಲೆ ಏರಿಬರುವುದರಲ್ಲಿತ್ತು. ಉಷಾ ಈಕೆ ವಸಂತರಾಯನ ಹೆಂಡತಿಗೆ ಶರಣು ಹೋಗಿಯಾದರೂ ಪತ್ನಿಪದವಿಯನ್ನು ಸಂಪಾದಿಸಬೇಕೆಂಬ ಶ್ರೀಮದ್ಗಂಭೀರವಿಚಾರದಿಂದ ಹಂಚಿಕೆಹಾಕುತ್ತಿದ್ದಾಳೆ. ಕಿಶೋರಿಗೆ (ವಸಂತರಾಯನ ಹೆಂಡತಿಗೆ) ಇದೆಲ್ಲ ಕಣ್ಕಿಸರಾಗಿ, ಜೀವಕ್ಕೆ ಬೇಜಾರಾಗಿ ಹೋಗಿದೆ. ಒಂದು ದಿನ, ಆಕೆ ತಲೆತಿರುಗಿದಂತಾಗಿ, ಅದೇ ಊರಲ್ಲಿದ್ದ ತನ್ನ ತವರುಮನೆಗೆ ಬಂದುಬಿಡುತ್ತಾಳೆ. ಈ ಮೊದಲೇ ಈ ವ್ಯಾಧಿಯ ಗಾಳಿ ತವರುಮನೆಯವರಿಗೆ ತಾಕಿದ್ದರೂ ಅದು ಈ ಉಲ್ಬಣಾವಸ್ಥೆಯನ್ನು ಹೀಗೆ ಅಕಸ್ಮಾತ್ತಾಗಿ ತಾಳೀತು ಎಂದು ತೋಚಿರಲೇ ಇಲ್ಲ. ವಿಧಿ ತನ್ನ ಕರ್ಮ ಸಮಸ್ಯೆಯನ್ನು ಈ ರೀತಿಯಲ್ಲಿ ಕಿಶೋರಿಯ ತಾಯಿ ಇಂದಿರಾಬಾಯಿಯ ಇದಿರು ಒಡ್ಡಿತು — ಇದು ನಾಟಕದ ಪ್ರಾರಂಭ, ಮುಖ.

ಮೊದಲನೆಯ ಅಂಕದಲ್ಲಿ ಇಂದಿರಾಬಾಯಿಗೆ ಉಂಟಾದ ಚಿಂತೆ, ಕಿಶೋರಿಯ ತಂಗಿ ಬೇಬಿ — ಈ ಕರ್ಮವ್ಯೂಹವನ್ನು ಭೇದಿಸಿ, ಛೇದಿಸಿ ನುಗ್ಗಲೆಳಿಸುವ ಹೊಸಕಾಲದ ನೋಟ, ಇಂದಿರಾಬಾಯಿಯ ಕರೆಗೆ ಓಗೊಟ್ಟು ಇದಕ್ಕಾಗಿಯೇ ಬಂದ ಶ್ರೀಕಾಂತ (ಅಪ್ಪಾರಾಯರ ಅಣ್ಣನ ಮಗ)ನ ಬುದ್ಧಿಯ ವಿಚಾರವಿಲಾಸ, ಅದಕ್ಕೂ ಹೆಚ್ಚಾಗಿ ಈ ಕರ್ಮಫಲದ ನಾಯಕನಂತಿರುವ ಅಪ್ಪಾರಾಯನ ಜೀವನದ ಅಡ್ಡಮುಠ್ಠಾಳತನದ ವೈಖರಿ — ಇವುಗಳ ಪರಿಚಯವಾಗಿ ಆ ವ್ಯೂಹಭೇದಕ್ಕಾಗಿ ಶ್ರೀಕಾಂತ

ಪ್ರಾರಂಭಿಸುವ ಪೌರುಷಪ್ರಯತ್ನದ ಪ್ರಥಮ ರಣಾಂಗಣವಾಗಿ, ನಮಗೆ ಎರಡನೆಯ ಅಂಕ ತೆರೆಯುತ್ತದೆ. ಶ್ರೀಕಾಂತನು ವಸಂತರಾಯನ ಗೆಳೆಯ.

ಇತ್ತ ವಸಂತರಾಯ ಇಬ್ಬರು ಹೆಂಡಿರ ಕಾಟ ಹಗಲು ತಗಣಿಯ ಕಾಟವಾಗದಂತೆ, ಆಟ ಆಗುವಂತೆ, ಹೇಗೆ ರಚಿಸಬೇಕೆಂಬ ಗೊಂದಲದಲ್ಲಿ ಏನೂ ತೋಚದೆ ಉಷೆಯಿಂದ ಒಂದೆರಡು ದಿನದ ತೆರವು ಪಡೆಕೊಂಡಿರುವಾಗ, ಉಷೆಗೆ ಅಷ್ಟು ವಿರಹವೂ ಸಹನವಾಗದೆ, ವಸಂತರಾಯನ ಸತ್ವ ಪರೀಕ್ಷೆಗೆ, ಆಕೆ ಅವನ ಮನೆಮುಟ್ಟ ಬಂದೇಬಿಡುತ್ತಾಳೆ. ಕಿಶೋರಿ ಅಷ್ಟರಲ್ಲೇ ಮನೆ ಬಿಟ್ಟು ಹೋಗಿದ್ದಾಳೆ. ಇಬ್ಬರಿಗೂ ತಾವು ಸಿಕ್ಕಿಕೊಂಡಿರುವ ತೊಡಕಿನ ಕಲ್ಪನೆ ಬರುತ್ತದೆ. ಬರಿ ಕಲ್ಪನೆ ಮಾಡಿ ಏನು? ಕಾಲ-ಕರ್ಮ ಎರಡೂ ಸಾಲಗಾರರಂತೆ ಅದಕ್ಕೆ 'ರೋಖು' ಉತ್ತರವನ್ನು ಬೇಡುತ್ತಿದೆ. ಎರಡು ದಿನ ಹಾಗೇ ಕಳೆದರೆ ಮುಂದೆ ಈ ಅವಕಾಶವೂ ಸಿಕ್ಕದು! ಅವರ ಪ್ರಣಯದ ಸಂಹಾರ ಉಪಸಂಹಾರ ಅಲ್ಲೇ ಆಯಿತು! ಸದ್ಯಕ್ಕಂತೂ ಉಷೆಗೆ (ಮನೆಯಲ್ಲಿ ಕಿಶೋರಿ ಇಲ್ಲದ್ದರಿಂದ) ಅಡಿಗೆಮನೆ ಹೊಕ್ಕು 'ಚಹಾ' ಮಾಡುವ **ತಾತ್ಪೂರ್ತಿಕ ಬದಲೀ** ಕೆಲಸ ಸಿಗುತ್ತದೆ. ಇಷ್ಟಕ್ಕೇ ಅವಳಿಗೆ ಏನು ಆನಂದ! ಅದು ಶುಭಸೂಚನೆಯೆಂದೇ ಆಕೆ ತಿಳಿದಿರಲು ಸಾಕು. ಈ ಹೊತ್ತಿಗೆ ಶ್ರೀಕಾಂತ ಅಲಕ್ ಎಂದು ವಸಂತರಾಯನ ಮನೆಗೆ ಹೋಗುತ್ತಾನೆ. ಅವನಿಗೆ ಉಷಾ ಒಳಗಿರಬೇಕು ಎಂಬುದು ಗೊತ್ತಿಲ್ಲ. ಶ್ರೀಕಾಂತನು ಕುರುಕ್ಷೇತ್ರದ ಒಂದು ಪರ್ವದ ಪೂರ್ತಿಗಾಗಿಯೇ ಬಂದಿದ್ದಾನೆ. ಆ ಬೌದ್ಧಿಕ ಯುದ್ಧ ವಾರ್ತೆಯನ್ನು ಓದಿನೋಡಬೇಕು. ರಂಗಭೂಮಿಯಲ್ಲಿ ಆದರ ದೃಶ್ಯದ ಆಟ ನೋಡಬೇಕು. ಒಬ್ಬ ಗಂಡಸು ಪ್ರಣಯದ ಹೆಸರಿನಲ್ಲಿ ನಿಶ್ಚಿಂತನಾಗಿ ಎಂಥ ಚೇಷ್ಟೆ ನಡೆಸಿದ್ದಾನೆ, ನಡೆಸುತ್ತಾನೆ, ಇದು ಅವನ ಮುಖದಿದಿರು ಕನ್ನಡಿ ಹಿಡಿಯದೆ ಅವನಿಗೇ ಸ್ವಸ್ವರೂಪ ವಿಜ್ಞಾನವಾಗದು. ಇನ್ನೊಬ್ಬರ ದೃಷ್ಟಿಗೆ ಅದು ಹೇಗೆ ಕಾಣುತ್ತದೆ? ಈ ಮಾತು ಇರಲಿ; ಆ ಗಂಡಸಿಗೆ ತನ್ನ ಹೆಂಡತಿ (ಅರ್ಥಾತ್ ಪ್ರಥಮಪತ್ನಿ) ಈ ಹೊಸ ಅವಸ್ಥೆಯಲ್ಲಿ ಹೇಗಿರಬಹುದು ಎಂಬುದರ ಸರಿಯಾದ ಅರಿವೂ ಹೇಗೆ ಸುತರಾಂ ಇರುವುದಿಲ್ಲ, ಸ್ತ್ರೀ ವಿಷಯದಲ್ಲಿ 'ಪತಿ' ಎಂಬ ಪುರುಷನ ವಿಚಾರಗಳು ಸಂಸ್ಕೃತಿಯ ಹೆಸರಿನಲ್ಲಿ ನಿಜವಾಗಿ ಎಷ್ಟು ವಿಕೃತವಾಗಿರುತ್ತವೆ

— ಇವೇ ಮೊದಲಾದ ಮಾತುಗಳು, ವಸಂತರಾಯ – ಶ್ರೀಕಾಂತ ಇವರ ವಾದ-ವಿವಾದದಲ್ಲಿ ಹೊರಬೀಳುವುವು. ಆನುಷಂಗಿಕವಾಗಿ ಶ್ರೀಕಾಂತನು ಉಷೆಯ ವಿಷಯವಾಗಿಯೂ ಕೆಲವು ಅ-ಸಹ್ಯ ಮಾತುಗಳನ್ನಾಡುತ್ತಾನೆ. ಅವು ಉಷೆಯ ಕಿವಿಗೆ ಬೀಳುತ್ತವೆ. ಆಕೆ ಕೆರಳಿ ಹೊರಗೆ ಬಂದು ಶ್ರೀಕಾಂತನನ್ನು ಇದಿರಿಸುತ್ತಾಳೆ. ಈ ಸಂಗ್ರಾಮದಲ್ಲಿ ಅಕಲ್ಪಿತವಾಗಿ ಉಷೆಯು ಇಂದಿರಾಬಾಯಿಯ ಖಾಸಾ ಸವತಿಯ ಮಗಳೇ ಎಂಬ ಮಾತು ಮೂವರ ಮೇಲೂ ಮಿಂಚಿನಿಂದ ಹೊಳೆದು ಸಿಡಿಲಾಗಿ ಎರಗುತ್ತದೆ. ಈ ಹೊಸ ಸಂಘಟನೆ ಮೂರನೆಯ ಅಂಕದ ವಿಚಿತ್ರ ರೌದ್ರಕ್ಕೆ ಹಾದಿಮಾಡಿ ಕೊಡುತ್ತದೆ.

ಅಪ್ಪಾರಾಯ, ಇಂದಿರಾಬಾಯಿ, ಬೇಬಿ, ಶ್ರೀಕಾಂತ— ಎಲ್ಲರೂ ಒಂದಿಲ್ಲೊಂದು ಬಗೆಯಿಂದ ಉಷೆಯ ಮನೆಗೆ ಬಂದು ತಮ್ಮ ಯುಕ್ತಿ ಪ್ರಯುಕ್ತಿಗಳ ಹೋರಾಟ ಹೂಡುತ್ತಾರೆ. ಅದರಿಂದೇನೂ ನಿಷ್ಪನ್ನವಾಗದೆ — ಅಪ್ಪಾರಾವ್ ಮತ್ತು ಕಂಪನಿ ಲಿಮಿಟೆಡ್ಡಿಗೆ ಬಾಯ್ಮುಚ್ಚಿಕೊಂಡು ಕೈಕಟ್ಟಿಕೊಂಡು ದೈವಕ್ಕೆ ಶರಣಾಗತಿ ಬರೆದುಕೊಟ್ಟು ಉಷೆಯ ಮನೆಯಿಂದ ಹೊರಬೀಳಬೇಕಾಗುತ್ತದೆ. ಅಪ್ಪಾರಾಯನ ಗೃಹಸ್ತಿಕೆಗೆ ಈ ದುಷ್ಫಲ ಪ್ರಾಪ್ತಿಯಾಗುತ್ತದೆ. ಉಷೆಯು ತಾಯಿಯನ್ನು ತಿರಸ್ಕರಿಸಿ, ಇಂದಿರಾ ಬಾಯಿಯು ಪ್ರತಿಷ್ಠಿತಳಾದಂತೆ, ಇಂದಿರಾಬಾಯಿಯ ಮಗಳನ್ನು ಧಿಕ್ಕರಿಸಿ ಇಂದು ಉಷೆ ವಿಜಯಿಯಾಗಿ ನಿಂತಿದ್ದಾಳೆ— ಕರ್ಮವಿಪಾಕದ ವಿಚಿತ್ರ ಲೀಲೆಯಿಂದ! ಇಲ್ಲಿ ಎರಡನೆಯ ಸಂಗ್ರಾಮ ಮುಗಿದರೂ, ಕರ್ಮ ನಾಟಕದ ಅಪೂರ್ವ ಫಲಪ್ರಾಪ್ತಿ ನಾಲ್ಕನೆಯ ಅಂಕದಲ್ಲಿ ಆಗುತ್ತದೆ. ಯಾಕೆಂದರೆ ನಾಟಕದ ಮುಖ್ಯ ನಾಯಕಪಾತ್ರ ಇಂದಿರಾಬಾಯಿಯಾಗಿದ್ದಾಳೆ. ಆಕೆಯ ಕರ್ಮಫಲವೇ ನಾಟಕದ ಮುಕ್ತಾಯ.

ಏನು? ವೃದ್ಧದಶೆಗೆ ಬರುತ್ತಿರುವ ಈ ಅತಿಪ್ರೌಢೆ ನಾಟಕದ ನಾಯಕಿಯೇ? ಹೌದು. ನಾಯಿಕೆಯ ಪತಿಯೆಂದು ಅಪ್ಪಾರಾಯನೂ ನಾಯಕ. ವಸಂತರಾಯ ಉಷೆ ಇವರು ಉಪನಾಯಕ, ನಾಯಿಕೆ; ಶ್ರೀಕಾಂತ ಬೇಬಿ ಇವರು ಉದ್ದೀಪಕಸಾಮಗ್ರಿಯಾದ ಅವಶ್ಯ ಪಾತ್ರಗಳು; ನೇಮಾ ಮತ್ತು ಚೈತನ್ಯದೇವ ಇವರು ನಾಟಕದ ಮೂರ್ತಿಪೂಜೆಗೆ

ಒಂದೊಂದು ರೀತಿಯಿಂದ ಆವಶ್ಯಕವಾದ ಅಲಂಕಾರಿಕ ಪಾತ್ರಗಳು. ಹೀಗಿದೆ ಪಾತ್ರಗಳ ಸಂಚು. ನಾಟಕವಸ್ತುವಿಗೆ ಸ್ಥಾಯಿಾಕಾರಣಳಾದ ಕಿಶೋರಿ—ಮೂಕನಾಯಿಕೆ! ಅವ್ಯಕ್ತಮೂರ್ತಿ! ಸ್ತ್ರೀಸಮಸ್ಯೆಯ ಆಹ್ವಾನವನ್ನು ಬೀರುವ ಯಕ್ಷಿಣಿ! ಇಂದಿರಾಬಾಯಿಯ ಗುಪ್ತಸುಪ್ತಹೃದಯದ ಸಂಕೇತ—ಪ್ರತಿಮೆ!

ಹಾಗಾದರೆ, "ಜೂಜು"ವಿನಲ್ಲಿ ಜೀವನದ ಯಾವ ಸಮಸ್ಯೆಯ ಆವಿಷ್ಕಾರವನ್ನು ನಾಟಕಕಾರರು ಮಾಡಿದ್ದಾರೆ? "ಜೂಜು" ಎಂಬ ಈ ನಾಟಕನಾಮದೊಡನೆ ಅದರ ಸಂಬಂಧವೇನು? "ಸ್ತ್ರೀ-ಪುರುಷ" ಲಗ್ನವೂ ದೈವಪೌರುಷಗಳ ಜೂಜಾಟ; ಅದರ ಫಲವೂ ಕೂಡ (ಅದು ಸಂಪ್ರದಾಯದ ಮಾರ್ಗವಾಗಿ ಬರಲಿ ಅಥವಾ ಪ್ರಣಯದ ವಿಶೇಷ ದೇಸಿಯಿಂದ ಸಿಂಗಾರಗೊಂಡು ಅಭಿನವ ಆವಿರ್ಭಾವದಿಂದ ಬರಲಿ!) ದ್ಯೂತದಂತೆಯೇ, ಇಂದಿಗೂ, ಈ ಇಪ್ಪತ್ತನೆಯ ಶತಮಾನದಲ್ಲಿಯೂ, ಸುಶಿಕ್ಷಿತ ಸಮಾಜದಲ್ಲಿಯೂ, ಅನಿರ್ಣೀತ ಮತ್ತು ಅನಪೇಕ್ಷಿತ. ಯಾಕೆ? ಯಾಕೆಂದರೆ, ಜಾತಿ ಜಾತಿಗೆ ವೈರಿ ಎಂಬಂತೆ, ಸ್ತ್ರೀಯೇ ಒಂದು ವಿಧದಲ್ಲಿ ಸ್ತ್ರೀಯ ದೈವ ದುರ್ವಿಪಾಕಕ್ಕೆ ಬೆಂಕಿ ಹೊತ್ತಿಸುತ್ತಾಳೆ— ಆದಕಾರಣ! ಕಿಶೋರಿಯ ವಿರಸದ ಸಂಧಿಯನ್ನು ಅನುಕೂಲಮಾಡಿಕೊಂಡು ಉಷೆ ವಸಂತರಾಯನಿಗೆ ಅಧೀನಳಾಗದೆ ಇದ್ದರೆ— ಕೆಲಕಾಲದಲ್ಲಿ— ಕಿಶೋರಿ ಮತ್ತು ವಸಂತರಾಯರಿಗೆ ಮತ್ತೆ ಸುದಿನ ಬರಬಹುದಾಗಿತ್ತು. ವಸಂತರಾಯನಿಗೆ ಈ ಉಷಾದೇವಿಯಲ್ಲ, ಮತ್ತೊಬ್ಬ ಸಂಧ್ಯಾದೇವಿಯು ಗಂಟು ಬೀಳಬಹುದಾಗಿತ್ತಲ್ಲ— ಎನ್ನಬಹುದು. ಆದರೆ ಇದು ಕುರುಡು ಪ್ರಶ್ನೆ. ಒಬ್ಬ ಸ್ತ್ರೀಯನ್ನು ತಿರಸ್ಕರಿಸಿದವನಿಗೆ ಬೇರೆ ಯಾವ ಸ್ತ್ರೀಯೂ ಒಲಿಯದಿದ್ದರೆ, ಮೊದಲನೆಯವಳ ಪ್ರಣಯಾರಾಧನೆಯಲ್ಲದೆ ಆ ಗಂಡಸಿಗೆ ಗತಿ ಯಾವುದು? ಇದರ ವಿಚಾರ ಅವನು ಮಾಡಬೇಕಾದೀತು. ಆದರೆ ಅದು ಗಂಡಸಿನ ವಿಚಾರ. ನಾಟಕಕಾರ್ತಿಯರು ಆ ವಿಚಾರಕ್ಕೆ ಈ ನಾಟಕದಲ್ಲಿ ಅಷ್ಟು ಗಮನ ಕೊಟ್ಟಿಲ್ಲ. ಆದರೆ ಸ್ತ್ರೀಯು, ಯಾವುದೇ ವಿಧದಲ್ಲಿ ಸ್ತ್ರೀಗೆ ವಿರೋಧಿಯಾಗಿ, ಪುರುಷನ ನಿರಾತಂಕ ಲಗ್ನವಿಧಿಗೆ ಸಂಪ್ರದಾಯ ಶರಣತೆಯಿಂದಾಗಲೀ, ಯೌವನ ಪ್ರಣಯದ ಭ್ರಾಂತಿವಿಲಾಸದಿಂದಾಗಲೀ

ಮನಸೋಲಬಾರದು ಎಂಬ ಎಚ್ಚರಿಕೆಯನ್ನು ನಾಟಕಕಾರ್ತಿಯರು ಸ್ತ್ರೀ ಸಮಾಜಕ್ಕೆ ಕೊಡುತ್ತಿದ್ದಾರೆ. ಈ ಎಚ್ಚರ ಬಂದರೆ, ಲಗ್ನವೆಂಬ "ಜೂಜಿ"ನ ದುರಂತದ ರೌದ್ರರೂಪವು ತನ್ನ ಭಯಾನಕತೆಯನ್ನು ಎಷ್ಟೋಮಟ್ಟಿಗೆ ಕಳೆದುಕೊಂಡೀತು— ಇದು ನಾಟಕಕಾರ್ತಿಯರ ಜೀವನ ದರ್ಶನ— ಈ ನಾಟಕದ ಮಟ್ಟಿಗೆ. ಈ ಜೀವನದರ್ಶನದಲ್ಲಿ ಸತ್ಯದ ಸತ್ವವಿದ್ದರೆ ಮಾನವ ಸಮಾಜವು ಇದೊಂದೇ ಪ್ರಯೋಗದಿಂದ ಎಚ್ಚೆತ್ತೀತು, ಎಂದಲ್ಲ. ಈ ಎಚ್ಚರದಿಂದ ಮೈತುಂಬ ಕಣ್ಣು ಮೂಡುವಂತೆ ಅದರ ವಿಶ್ವರೂಪದರ್ಶನ ವನ್ನು ಅನೇಕ ನಾಟಕಗಳಿಂದಲೂ ಮಾಡಬೇಕಾದೀತು. ಅದು ಮುಂದಿನ ಮಾತು.

ಈ ನಾಟಕದಲ್ಲಿ ಆ ದರ್ಶನ ಮಾಡಿಕೊಡುವ ಪಾತ್ರವು ಇಂದಿರಾ ಬಾಯಿ, ಅವಳಿಗೇ ಅದರ ಸಾಕ್ಷಾತ್ಕಾರವಾಗಿದೆ. ಅವಳು ಅದಕ್ಕಾಗಿ ತಪಿಸಿದ್ದಾಳೆ. ಆ ತಪದ ಅಗ್ನಿಜ್ವಾಲೆ, ಅದರ ಬೆಳಕು ಬೆಂಕಿಗಳು, ಆಕೆಯ ಶಿಷ್ಟಸಮ್ಮತ ಸಂಸಾರಸ್ವರೂಪದಿಂದ ಅಡಗಿದಂತೆಯೇ ಇದ್ದುವು. ಉಷೆಯ ತಾಯಿಯ ಸ್ಥಾನವನ್ನು ಇಂದಿರಾಬಾಯಿಯು ಆಕ್ರಮಿಸಿದ್ದಳು. ಅದಕ್ಕೆ ಆಕೆಯ ಹೃದಯದ ಸಮ್ಮತಿ ಇರಲಿಲ್ಲ. ಆದರೆ ಈ ಹೃದಯದ ಅ-ಸಮ್ಮತಿ ಯನ್ನು ಆಕೆ ಇಂಥ ಬಂಗಾರದಂಥ ಸಂಬಂಧ ತಾನಾಗಿ ಒದಗಿಬಂದು, ಒಟ್ಟಿನಲ್ಲಿ ಸಂಸಾರಸಂಭ್ರಮ ಸುಸೂತ್ರ ನಡೆದಾಗ, ಯಾಕೆ ಪ್ರಕಟಿಸ ಬೇಕು? ಯಾವಾಗ ಪ್ರಕಟಿಸಬೇಕು? ಆಕೆಯ ಹೆಣ್ಣುಮಕ್ಕಳ ಸಂಸಾರ ತಾತ್ಪರ್ಯಾರ್ಥದಿಂದ ಸುಖಮುಖವಾಗಿ ಸಾಗಿದ್ದರೆ, ಇಂದಿರಾಬಾಯಿ ತನ್ನ ಹೃದಯದ ಅಸಮ್ಮತಿಯೊಡನೆ ಚಿತೆಯಲ್ಲಿ ಭಸ್ಮವಾಗುತ್ತಿದ್ದಳೋ ಏನೋ! ಪುಣ್ಯಾತ್ಮ ವಿಧಿ ಹಾಗೆ ಮಾಡಿಕೊಡಲಿಲ್ಲ! ಪುತ್ರನು ಆತ್ಮರೂಪ ಎಂದು ಹೇಳುವುದಿಲ್ಲವೆ? ಹಾಗೆಯೇ ಹೆಣ್ಣಿಗೆ ಪುತ್ರಿ. ಇಂದಿರಾಬಾಯಿಯ ಪುತ್ರಿ ಕಿಶೋರಿ, ಪ್ರತಿಪುತ್ರಿ ಉಷಾ ಇವರಿಬ್ಬರನ್ನೂ ಕರ್ಮದೇವತೆಯು ಇದಿರುಬದಿರು ತಂದು, "ಅಪಘಾತ ಸಂಭವಿಸದಂತೆ ಈ ಕೂಟಪ್ರಶ್ನೆ ಯನ್ನು ಬಿಡಿಸುವಿಯೆಂತು?" ಎಂದೇ ಇಂದಿರಾಬಾಯಿಯನ್ನು ಕೇಳುತ್ತದೆ. ಶ್ರೀಕಾಂತ ಅಪ್ಪಾರಾಯ ಇಬ್ಬರೂ ವಸಂತರಾಯನೆಂಬ ಪುರುಷನನ್ನು ಈ ಅವಿವೇಕ-ಪ್ರಪಾತದಿಂದ ಹಿಂದಿರುಗಿಸಲು ಸಮರ್ಥರಿಲ್ಲ. ಇಂದಿರಾ

ಬಾಯಿಯ ವಿಕ್ರಮವು ಮಾತ್ರ ಉಷೆಯಲ್ಲಿ ಈ ವಿವೇಕಜಾಗ್ರತಿಯನ್ನು ಮಾಡಲು ಸಮರ್ಥವಾಗುತ್ತದೆ. ಇದು ಈ ನಾಯಿಕೆಯ ಪೌರುಷ ಸಿದ್ಧಿ. ಇವೇ ನಾಲ್ಕನೆಯ ಅಂಕದ ಕಾರ್ಯ. ಅದರಿಂದಲೇ ನಾಟಕದ ಮುಕ್ತಾಯ.

ಬೇಬಿಯ ಚಟಪಟ ಕಡ್ಡಿಗಳು ಮೊದಲೇ ಹಾರಿಹೋದವು; ನೇಮಾನ ಜಗತ್ತು ಜಾನಪದದ ಪೌರಾಣಿಕ ಲೋಕ; ಆಕೆಯ ಮಾತುಕಥೆ ಅಲ್ಲಿಯ ವಾರ್ತೆ; ಕಿಶೋರಿಯೋ ಸಮಾಧಿಗ್ರಸ್ತಳು; ಇಂದಿರಾಬಾಯಿ – ಉಷಾ ಇವರೇ ಸ್ತ್ರೀಜೀವನ ದುರಂತವನ್ನು ಪ್ರಶಮಮುಖವಾಗಿ ಹೊರಳಿಸಬೇಕಾಗಿದೆ. ಕೆಲ ನಾಟಕಕಾರರ ದೃಷ್ಟಿಯಲ್ಲಿ ಸವತಿಮತ್ಸರದ ಸ್ಪರ್ಧೆಯಲ್ಲಿ ಪುರುಷನು ಪಣಕ್ಕೆ ಹಚ್ಚಿದ ಒಂದು ವಸ್ತುಮಾತ್ರ, ಅಂತೆ; ಮತ್ತೆ ಇನ್ನೊಂದು ದೃಷ್ಟಿಯಲ್ಲಿ—ಪುರುಷನ ಕಾಮಾಗ್ನಿಹೋತ್ರದಲ್ಲಿ ಬಲಿಯಾಗುವ ಹರಕೆಯ ಕುರಿಗಳು ಸ್ತ್ರೀಯರು — ಅಂತೆ! ಈ "ಅಂತೆಗಳ" ಕಂತೆ ಹೊಲಿಯುವ ಅಥವಾ ಆ ಹೊಲಿಗೆ ಬಿಚ್ಚುವ ಮಾತು ಇಲ್ಲಿ ಅಪ್ರಸ್ತುತ ಎಂದು ನಾನು ತಿಳಿಯುತ್ತೇನೆ. ಸ್ತ್ರೀ ಪುರುಷ ಸಂಬಂಧದಿಂದುಂಟಾಗುವ ದುಃಖದಲ್ಲಿ ಸ್ತ್ರೀಯು ಸ್ತ್ರೀಗೆ ಪ್ರತಿಕಾರಿಯಾಗಬಾರದು. ಅವಳ ಸುಖಕ್ಕೆ ಉಪಕಾರಿ, ಸಹಕಾರಿಯಾಗಬೇಕು. "ಮಾಲವಿಕಾಗ್ನಿಮಿತ್ರ" ದಲ್ಲಿ ಕಾಲಿದಾಸನು "ಧಾರಿಣಿ – ಇರಾವತಿ – ಮಾಲವಿಕಾ" ಇವರ ಮೂರಾಬಟ್ಟೆಯನ್ನು ಸ್ತ್ರೀ ಹೃದಯದ ಅಮೃತದಿಂದ ಸಿಂಚನಮಾಡಿ ನಂದನ-ವಂಥ ವನ್ನಾಗಿ ಮಾಡಿದ್ದಾನೆ. ಆ ನಾಟಕವೇ ಬೇರೆ! ಇಂದಿನ ದುಃಸಂಸ್ಕೃತಿಯ ಪ್ರಳಯಾವಸ್ಥೆಯಲ್ಲಿ, ಕೌಟುಂಬಿಕ ದುರಂತದಲ್ಲಿ, ಸ್ತ್ರೀಯು ಮಾಡಬೇಕಾದು ದೇನು? ಎಂಬುದನ್ನು ಈ ನಾಟಕಕಾರ್ತಿಯರು ಕಾರಣದೃಷ್ಟಿಯಲ್ಲಿ ಕಂಡು, ಸೂಕ್ಷ್ಮದೃಷ್ಟಿಯಿಂದ ಚಿತ್ರಿಸಿ, ಪ್ರೇಕ್ಷಕ ಪ್ರಪಂಚದ ಸ್ಥೂಲದೃಷ್ಟಿಗೆ ಒಡ್ಡಿದ್ದಾರೆ. ಇದು, ನಾಟಕವು ಪಂಚಮ ವೇದ ಎಂಬುದರ ಸಾರ್ಥಕತೆ. ಇದು, "ಜೂಜು"ವಿನ ವಿಷಯ. ಜಾಯಾಪತಿಗಳದು ದಾಂಪತ್ಯವಾಗದೆ ದ್ವಂದ್ವವಾಗುತ್ತಿರುವುದು ಅದರ ದ್ಯೂತಸ್ವರೂಪದ ಮೂಲಕ. ಇದು, ದಾಂಪತ್ಯದ ವಿಕೃತಿ. "ಮರಣವು ಪ್ರಕೃತಿ; ಜೀವನವು ವಿಕೃತಿ" ಎಂಬ ಸುಭಾಷಿತದ ಸ್ಥೂಲಾರ್ಥವೇ ನಿಜವಾದರೆ, ನಮ್ಮ ಕೌಟುಂಬಿಕ ಜೀವನವು ವಿಕೃತಿಯಂತೆ ಕಾಣುವುದು, ನಮ್ಮ ಸಂಸ್ಕೃತಿಯ ಫಲವೆನ್ನೋಣವೇ?

ಏನು ನಮ್ಮ ಮರಣಶೀಲ ಪ್ರಕೃತಿಯ ದುಷ್ಕೃತಿ ಎನ್ನೋಣವೇ? ಇದಕ್ಕೆ ಉತ್ತರಕೊಡಬೇಕಾಗಿದೆ ಸಾಮಾಜಿಕರು. ನಾಟಕ-ಕಾರ್ತಿಯರೇ ತಮ್ಮ ಜೀವನದರ್ಶನವನ್ನು ನಾಟ್ಯದರ್ಶನದೊಡನೆ ಬೆರೆಸಿ, ತಾವೇ ಬರೆದ ಪ್ರಸ್ತಾವನೆಯಲ್ಲಿ ಬಹಳೇ ಮಾರ್ಮಿಕವಾಗಿ ಈ ಸಮಸ್ಯೆಯ ಮೀಮಾಂಸೆ ಮಾಡಿದ್ದಾರೆ. ಅದನ್ನು ವಾಚಕರು ಓದಬೇಕು. ಲಗ್ನ-ಜೀವನ ಒಂದು ಜೂಜು; ಅದರ ಫಲ? ದೇವರು ಬಲ್ಲ! ದೈವ ಬಲ್ಲದು! ಪ್ರಣಯ ವಿಲಾಸಿಗಳು— ಪರಂಪರಾಪ್ರಿಯರೂ ಇಬ್ಬರೂ ಲಗ್ನರಂಗಕ್ಕೆ ಎರಡು ಹಾದಿಯಿಂದ ಧುಮುಕುತ್ತಿದ್ದಾರೆ. ಆದರೆ ಆ ವೇದಿಕೆಯ ಮೇಲೆ ಅಗ್ನಿ ಇದೆ, ನಿಶ್ಚಯ; ಸೋಮವೇ, ಅಮೃತವೇ, ಇದೆಯೆಂದು ಹೇಳುವಂತಿಲ್ಲ. ಆ ಹೆಸರಿನ ಒಂದು ವಿಷ ಅಲ್ಲಿ ಇರಬಹುದು. ನಾಟಕಕಾರ್ತಿಯರು ಅನ್ನುತ್ತಾರೆ— "ಸ್ತ್ರೀ ಪುರುಷ ಸಾಹಚರ್ಯವು ವಿಶ್ವಯೋಜನೆಯ ಒಂದು ಮಹತ್ವದ ಘಟಕವಾಗಿದ್ದುದೇ ನಿಜವಾದರ, ಆ ಯೋಜನೆಯಲ್ಲಿ ಸುಖಮಯ ಸಾಹಚರ್ಯದ ಮಾರ್ಗಗಳೂ ಇರಲೇಬೇಕು. ಅವು **ನಮಗೆ** ಸಿಗುತ್ತಿಲ್ಲ. ..........ಸುಖಮಯ ಸಾಹಚರ್ಯದ ಬಗ್ಗೆ ವಿಶ್ವಾಸವೇ ಲೋಪ ವಾಗುವ ಈ ಘಟನೆ ನಿಜವಾಗಿಯೂ ಅತಿ ದುಃಖದಾಯಕವಾಗಿದೆ." ವಿಶ್ವದ ಆಕಾಶವಾಣಿಯಲ್ಲಿ ಅವರಿಗೆ ಕೇಳಿಸಿದ ಸಂದೇಶ ಇದು. ಅವರು ಇದನ್ನು ನಮ್ಮ ನಿಮ್ಮ ಕಣ್ಣಿಗೂ ಕಿವಿಗೂ ಬುದ್ಧಿಗೂ ನಾಟ್ಯಾನ್ನವಾಗಿ ಉಣಿಸ ಲಿದ್ದಾರೆ ಈ ನಾಟಕದಲ್ಲಿ. ಇಂಥ ಒಂದು ತುತ್ತಿನಿಂದ ಯಾರ ಹೊಟ್ಟೆಯೂ ತುಂಬಲಾರದು. ಈ ದರ್ಶನವು ಹೃದಯಗತವಾಗುವುದು ಎಂದರೆ ಒಂದು ಬಗೆಯ ಮಾನವ–ಹೃದಯ–ಪರಿವರ್ತನವೇ! ಇದೇ ನಾಟ್ಯಕಲೆಯ ಉತ್ತಮ ಆದರ್ಶ. ಆ ಕೌಶಲ ಇಲ್ಲಿದೆ.

ಈ ದರ್ಶನಕ್ಕೆ ನಿರಾಶಾವಾದದ ದುರ್ವಾಸನೆ ಇದೆಯಲ್ಲಾ–ಎಂದರೆ, ಈ ಕೊಳೆಯ ನಾತವೇ ಅಂತಹುದು ಎಂಬುದು ನಮಗೆ ತಿಳಿಯಬೇಕು. ಹಳೆಯ ಅಥವಾ ಹೊಸ ಸಾಂಸ್ಕೃತಿಕ ಆಢ್ಯತೆಯಿಂದ ಆ ನಾತಕ್ಕೆ ಮೂಗು ಮುರಿಯುವುದರಿಂದ ಬಂದೀತೇನು? ಇದ್ದ ಜೀವನದ ದುರ್ಗಂಧವನ್ನು ಅಡಗಿಸಿಡುವುದಕ್ಕೆ ಆಶಾವಾದದ ಅತ್ತರಿನ ಥಳಿ ಹೊಡೆಯುವುದರಿಂದ, ಆಗುವುದೇನು? ಅದು ಭ್ರಾಂತಸಾಂಸ್ಕೃತಿಕರ ಡಂಭಾಚಾರವಾದೀತು.

ನಿಜವನ್ನು ಇದಿರಿಸಲಾಗದೆ ಕೃತ್ರಿಮ ಆಶಾವಾದದ ಢಾಲನೊಡ್ಡಿದರೆ ಯಾವ ಸಂರಕ್ಷಣೆಯೂ ಆಗದು. ಅತಿವಾಸ್ತವ ಜೀವನದ ಈ ಭ್ರಾಂತಿಯನ್ನು ಕಳೆಯುವುದೇ ನಿಜ ನಾಟಕ ಕಲೆಯ ಮರ್ಮ. ಈ ಮಾರ್ಮಿಕಕಾರ್ಯದ ಕೌಶಲ್ಯವು 'ಜುಗಾರ'—'ಜೂಜು'ವಿನಲ್ಲಿ ಇರುವುದರಿಂದಲೇ, ತೀರಾ ಅಲ್ಪಕಾಲದಲ್ಲಿ ಈ ನಾಟಕದ ಬಗ್ಗೆ ಅಪೂರ್ವ ಕೌತುಕವು ತಾನಾಗಿಯೇ ವ್ಯಕ್ತವಾಗುತ್ತ ಬಂದಿದೆ.

ಇನ್ನೊಂದೇ ಮಾತು, ಮುಂದಿನ ಸಾಮಾಜಿಕ ಜೀವನದಲ್ಲಂತೂ ದ್ವಿಭಾರ್ಯಾ-ಕುಯೋಗವೇ ಅಸಂಭವವಾಗಿರುವುದರಿಂದ ಇಂಥ ನಾಟಕದ ಪ್ರಯೋಜನ ಮುಂದೇನು? ಎಂದು. "ಇದೇ ನಿಜವಿದ್ದರೆ, ಇಂದಾದರೂ ಅದರ ಪ್ರಯೋಜನವೇನು?" ಎಂದು ನಾನು ಕೇಳುತ್ತೇನೆ. ಯಾಕೆಂದರೆ ನಾಟಕವು ಪ್ರತ್ಯಕ್ಷವಾಗಿ ದ್ವಿಭಾರ್ಯಾಯೋಗಪ್ರತಿಬಂಧವಾಗಬೇಕೆಂದು ಬರೆದುದೇ ಅಲ್ಲ. ದ್ವಿಭಾರ್ಯಾಪ್ರತಿಬಂಧಕ ಕಟ್ಟಳೆಯಾದಮೇಲೆ ಬರೆದದ್ದು ಈ ನಾಟಕ. ಪಾನಪ್ರತಿಬಂಧಕ ಕಟ್ಟಳೆಯಾದಮೇಲೂ, ಅದರ ವಿಷಯಕ ವಾದ ಚಳುವಳಿಯು ಹೇಗೆ ಅವಶ್ಯವೋ ಹಾಗೆಯೇ ಇದು. ಯಾವ ಕಟ್ಟಳೆ ಯಿಂದಲೂ ಎಂಥ ಸಮಸ್ಯೆಯೂ ನಷ್ಟವಾಗುವುದಿಲ್ಲ. ಆ ಘಟನೆಗೆ ಕಾರಣ ವಾದ ವಾಸನಾ ದುರ್ಬೀಜವು ನಾಶವಾಗಬೇಕಾಗುತ್ತದೆ. ಅದಕ್ಕಾಗಿ ಈ ನಾಟಕಕಾರ್ತಿಯರೇ ಯಾಕೆ? ಉಳಿದ ನಾಟಕಕಾರರೂ, ಈ ದರ್ಶನದಲ್ಲಿ ಸತ್ಯವಿದ್ದರೆ, ತಮಗಾದ ಅದರ ಸಾಕ್ಷಾತ್ಕಾರವನ್ನು ಸರ್ವಸಾಮಾಜಿಕರಿಗೂ ಮಾಡಿಕೊಟ್ಟು, ಈ ಭೂತೋಚ್ಚಾಟನವನ್ನು ಮಾಡಬೇಕು. ಇದನ್ನರಿತು ನಟರು ಈ ಆಟವನ್ನು ಕೌಶಲ್ಯದಿಂದ ಅಭಿನಯಿಸಬೇಕು. ಸಮೀಕ್ಷಕರು ತಮಗೆ ಕಂಡ ಈ ಮರ್ಮ ತಿಳಿಸಿಕೊಡಬೇಕು. ನನ್ನ ಮರ್ಮಕ್ಕೆ ಸಂವೇದಿತವಾದ ಕೆಲ ಸಂವೇದನೆಗಳನ್ನು ಇಲ್ಲಿ ನಾನು ಬಯಲಿಗಿಟ್ಟಿದ್ದೇನೆ.

ಭಾಷಾಂತರ ಕಾರ್ಯವನ್ನು ಶ್ರೀ. ಲಕ್ಷ್ಮಣರಾಯರು ಚನ್ನಾಗಿ ನಿರ್ವಹಿಸಿದ್ದಾರೆ. ನಾಟ್ಯಪ್ರಯೋಗಗಳಿಂದ ಕಂಡುಬರಬಹುದಾದ ಅಪಶ್ರುತಿಯ ವಾಕ್ಯವಿನ್ಯಾಸ ಇತ್ಯಾದಿಗಳು ಮುಂದಿನ ಆವೃತ್ತಿಯಲ್ಲಿ ತಿದ್ದಲಾದಾವು ಎಂದಿಟ್ಟುಕೊಳ್ಳೋಣ. ಸೌ॥ ಮುಕ್ತಾಬಾಯಿ ದೀಕ್ಷಿತ ರವರು ತಮ್ಮ ಕತೆಗಳಲ್ಲಿಯೂ ಇಂಥ ಸೂಕ್ಷ್ಮದರ್ಶನವನ್ನು ಪ್ರದರ್ಶಿ

ಸಿದ್ಧಾರೆ. ಈ ನಾಟಕದಲ್ಲಿ ಅವರ ಪ್ರತಿಭೆಯ ಪ್ರೌಢದಶೆಯು ಆವಿಷ್ಕೃತವಾಗಿದೆ. 'Ripeness is all' ಎಂದ ಶೇಕ್ಸ್‌ಪಿಯರ್. 'ಸಮರಸವೇ ಜೀವನ' ಎಂದ ಅಂಬಿಕಾತನಯ. ಅಂಥ ಪರಿಪಾಕ ಇಂಥ ನಾಟಕಗಳಿಂದಲೂ ಆಗುವುದು. ಅದಕ್ಕಾಗಿ ನಾಟಕಕಾರ್ತಿಯರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ನಾಟಕ ಇಂದಿನ ಭಾರತೀಯ ನಾಟಕದಲ್ಲಿ ಭೂಷಣಪ್ರಾಯವಾಗಿದೆ. ಕನ್ನಡದಲ್ಲಿಯೂ ಇದು ವಾಗ್ಭೂಷಣವಾಗಲಿ ಎಂದು ನಾನು ಆಶಿಸುತ್ತೇನೆ.

ಪೂನಾ, ೪-೪-೧೯೫೪<br>
ಯುಗಾದಿ

**ದ. ರಾ. ಬೇಂದ್ರೆ**

# ಪ್ರಸ್ತಾವನೆ

ಮರಾಠಿ ಭಾಷೆಯಲ್ಲಿಯ ನನ್ನ 'ಜುಗಾರ' ನಾಟಕಕ್ಕೆ ಮೊದಲ ಸಲ ಮುನ್ನುಡಿಯನ್ನು ಬರೆಯಲು ನಾನು ಲೆಕ್ಕಣಿಕೆಯನ್ನೆತ್ತಿದುದು ತುಸು ಅಂಜಂಜುತ್ತಲೆ! ಅಪರಿಚಿತ ಕ್ಷೇತ್ರದಲ್ಲಿ ಹೆಜ್ಜೆಯನ್ನಿಟ್ಟು ಅದಕ್ಕೆ ಅಪಚಾರವನ್ನು ಮಾಡುತ್ತಿರುವೆನೇನೊ ಎಂಬ ಅಂದಿನ ನನ್ನ ಮನಃಸ್ಥಿತಿ, ಈಗ ಕನ್ನಡ 'ಜೂಜಿ'ಗೆ ಮುನ್ನುಡಿಯ ಎರಡು ಮಾತು ಬರೆಯುವಾಗಿನ ಇಂದಿನ ನನ್ನ ಮನಃಸ್ಥಿತಿ— ಇವೆರಡನ್ನೂ ತುಲನೆಮಾಡಿ ನೋಡಿದರೆ ನನ್ನದು ನನಗೇ ಮೋಜೆನಿಸುತ್ತದೆ. ಹಡೆದ ತಾಯಿಗೆ ಮಗಳನ್ನು ಅತ್ತೆಯ ಮನೆಗೆ ಕಳಿಸುವಾಗ ಹೇಗ ಚಡಪಡಿಕೆ ಎನಿಸುವುದೊ ಹಾಗೆಯೆ ಮರಾಠಿ 'ಜುಗಾರ'ವನ್ನು ಮೊದಲ ಸಲ ಮುದ್ರಣಾಲಯಕ್ಕೆ ಕಳಿಸುವಾಗ ಇಂಥ ಒಂದು ಭಾವನೆ ನನ್ನನ್ನು ಹಗುರಾಗಿ ನೋಂಕಿದ್ದಿತು. ಪ್ರತಿಯೊಂದು ಜೀವವು ತನ್ನ ಅದೃಷ್ಟದ ಬಾಗಿಣವನ್ನು ತನ್ನೊಡನೆಯೇ ತರುವಂತೆ, ವಾಙ್ಮಯಕೃತಿಗಳು ಕೂಡ ತಮ್ಮ ವಾಲಿನ ಹಣೆಬರಹವನ್ನು ಬರೆದುಕೊಂಡೇ ಬರುತ್ತಿರಲು ನಾಕು! ಹೀಗೆ ನಾನೆಂದಾಗ 'ದೈಹಿಕಭೋಗ', 'ಮನ್ನಣೆ', 'ಲೋಕಪ್ರಿಯತೆ' ಎಂಬರ್ಥವಲ್ಲ. 'ಜುಗಾರ'ದ ವಿಷಯದಲ್ಲಿ ಅದರ ಭಾಗ್ಯ ಎಂದರೆ ಅದಕ್ಕೆ ದೊರೆತ ಸತ್ಸಂಗ ಎಂತಲೇ ನಾನು ಭಾವಿಸಿದ್ದೇನೆ. ಹಾಗಿಲ್ಲದಿದ್ದರೆ ಅದರ ಹಿಂದೀ ಅನುವಾದಕ್ಕೆ ಮಹಾದೇವಿವರ್ಮಾ ಅವರಂಥ ಶ್ರೇಷ್ಠ ಕವಯಿತ್ರಿಯು ಪ್ರಸ್ತಾವನೆಯನ್ನು ಬರೆದುದು ಹೇಗೆ?

ಈಗ ಕನ್ನಡದ ವಿಷಯದಲ್ಲಿ ಹೇಳುವುದಾದರೆ ಶ್ರೀ. ಬೇಂದ್ರೆ ಲಕ್ಷ್ಮಣ ರಾಯರಂಥ ಸ್ವತಃ ನಾಟಕಕಾರರಾಗಿದ್ದ ಸಾಹಿತ್ಯಿಕರು 'ಜುಗಾರ'ವನ್ನು ಮನವಾರೆ ಮೆಚ್ಚಿ ಕನ್ನಡದಲ್ಲಿ ಅನುವಾದಿಸಿದುದು, ಶ್ರೀ. ಪುರಾಣಿಕರಂಥ ಇನ್ನೊಬ್ಬ ನಾಟಕಕಾರ ನಟರು ಪುಣೆಯ ಕರ್ನಾಟಕ ಸಂಘದವರ ನೆರವಿನಿಂದ ಪುಣೆಯಂಥ ಪರಪ್ರಾಂತದಲ್ಲಿ ಅದನ್ನು ಯಶಸ್ವಿಯಾಗಿ ಅಭಿನಯಿಸಿದುದು, ಪ್ರೊ. ದ. ರಾ. ಬೇಂದ್ರೆಯವರಂಥ ಪಂಡಿತ ಕವಿಗಳು ಇದಕ್ಕೆ ಪ್ರಸ್ತಾವನೆಯ ಅಲಂಕಾರವನ್ನು ತೊಡಿಸಿದುದು, ಇದೆಲ್ಲಕ್ಕೂ ತಿಲಕವಿಟ್ಟಂತೆ ಶ್ರೀ. ಮಾಸ್ತಿಯವರಂಥ ಜ್ಯೇಷ್ಠರೂ ಶ್ರೇಷ್ಠರೂ ಆದ ಸಾಹಿತ್ಯಿಕರು ಇದನ್ನು ಪ್ರಕಟಿಸುತ್ತಿರುವುದು— ಇದೆಲ್ಲವೂ ಅದರ ಭಾಗ್ಯವೇ ಅಲ್ಲವೆ?

'ಜುಗಾರ' ಪ್ರಕಟವಾಗಿ ನಾಲ್ಕು ವರ್ಷಗಳು ಮುಗಿದುವು. ಈ ಅವಧಿಯಲ್ಲಿ ಅದನ್ನು ಕುರಿತು ತಿರುವು-ಮುರುವು, ಸರಳ-ವಕ್ರ, ಹಗುರು-ಜಡ ಎಲ್ಲ ಬಗೆಯ ಅಭಿಪ್ರಾಯಗಳೂ ಬಂದುಹೋದುವು! ಕೆಲವರಿಗೆ ಇಬ್ಬರ ಹೆಂಡರ ವಿಷಯ ಹಳೆಯದೆನಿಸಿತು. ಕೆಲವರಿಗೆ ಎರಡನೆಯ ಹೆಂಡತಿಯ ದುಃಖ ವಾಚಿಕವಾಗಿ ಹೊರಹೊಮ್ಮಿತಲ್ಲ ಎಂಬ ಕಾರಣದಿಂದ ಈ ವಿಷಯ ಹೊಸತೆನಿಸಿತು. ಅದರಲ್ಲಿಯ ವಾದವಿವಾದವು ಕೆಲವರಿಗೆ ತಲೆಭಾರವೆನಿಸಿದರೆ, ಕೆಲವರಿಗೆ ಸಂಭಾಷಣಗಳು ಬ್ಯಾಡ್ ಮಿಂಟನ್ನಿನ ಗರಿಚೆಂಡಿನಂತೆ ಹಗುರಾಗಿಯೂ, ಗುರಿಯಿಟ್ಟು ಎಸೆದಂತೆ ಪರಿಣಾಮಕಾರಿಯೂ ಆಗಿವೆ ಎಂದು ಮೆಚ್ಚಿಗೆ ಎನಿಸಿತು. 'ಆಕ್ಶನ್' ಸಾಕಷ್ಟಿಲ್ಲ ಎಂದು ಕೆಲವರು ಅತೃಪ್ತಿಪಟ್ಟರೆ, ಎರಡನೆ–ಮೂರನೆಯ ಅಂಕಗಳಲ್ಲಿಯ ಅನಪೇಕ್ಷಿತ ನಾಟ್ಯವು ಕೆಲವರನ್ನು ಅಚ್ಚರಿಗೊಳಿಸಿತು. ಕಿಶೋರಿ ರಂಗದಮೇಲೆ ಬರುವುದೇ ಇಲ್ಲ ಎಂದು ಆಡಿಕೊಂಡವರು ಕೆಲವರಾಗಿದ್ದರೆ, ಅವಳನ್ನು ಮರೆಯಲ್ಲಿಟ್ಟುದೇ ಕಲಾತ್ಮಕವಾಗಿದೆಯೆಂದು ಕೊಂಡಾಡಿದವರು ಹಲವರು! 'ಪರದುಃಖದ ಒಡಲೊಳಗಿಂದ ಸ್ವಸುಖ ಜನಿಸುವುದಿಲ್ಲ' ಎಂಬ ಸಿದ್ಧಾಂತವು ಕೆಲವರಿಗೆ ಸ್ವಾಗತಾರ್ಹವೆನಿಸಿದರೆ ಅದರಲ್ಲಿಯ ವಿನೋದದ ಅಭಾವ ಕೆಲವರಿಗೆ ಅನಾಕರ್ಷಕವಾಯಿತು. ಇದೆಲ್ಲವನ್ನೂ ನೋಡುತ್ತಿರುವಾಗ ಒಂದು ಮಾತು ಎದ್ದುಕಾಣುವಂತಿದೆ. ಅದೆಂದರೆ ಈ ನಾಲ್ಕು ವರ್ಷಗಳಲ್ಲಿ ಸಾಹಿತ್ಯ ಹಾಗು ರಂಗಭೂಮಿ ಈ ಎರಡೂ ಕ್ಷೇತ್ರಗಳಲ್ಲಿ ಜುಗುಪ್ಸೆಗಾಗಲಿ ಉಪೇಕ್ಷೆಗಾಗಲಿ ಗುರಿಯಾಗದೆ ಜನರ ವಿಚಾರಕ್ಕೆ ಈ ಕೃತಿ ಚಾಲನೆಯನ್ನೀಯುತ್ತಲೇ ಬಂದಿದೆಯೆನ್ನಬಹುದು. ನನ್ನ ದೃಷ್ಟಿಯಲ್ಲಿ ಇದು ಕೂಡ ಅದರದೊಂದು ಭಾಗ್ಯದ ಲಕ್ಷಣವೆಂದೇ ಹೇಳಬೇಕು! ಈ ಅದರ ಭಾಗ್ಯ ಮೂರು ಭಾಷೆಗೂ ಸಂಬಂಧಿಸಿದುದು. ಪೂರ್ವಸಂಕಲ್ಪದಂತೆ ಮರಾಠಿ ವಾಙ್ಮಯ-ಸಾಗರದಲ್ಲಿ ದೂಡಲ್ಪಟ್ಟ ಈ ನಾಟ್ಯನೌಕೆಯು, ಈಶಕೃಪೆಯಿಂದ ಪರಭಾಷೆಯ ಅಜ್ಞಾತಾಂಬುಧಿ (Unknown Waters)ಯಲ್ಲಿಯೂ ಪ್ರವೇಶವನ್ನು ದೊರಕಿಸಿ ಮತಮತಾಂತರಗಳ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿ ಹೊಯ್ದಾಡಿದರೂ ಮುಳುಗುವ ಹೆದರಿಕೆ ಮಾತ್ರ ನನ್ನ ಮನಸ್ಸಿನಲ್ಲೆಂದೂ ಸುಳಿದಾಡಲಿಲ್ಲ!

'ಜುಗಾರ'ದ ಮುರಾರಿ ಪ್ರಸ್ತಾವನೆಯಲ್ಲಿ ನಾನು ಶ್ರೀ. ದ. ರಾ. ಬೇಂದ್ರೆಯವರ 'ಜೀವನ ಎಂಬುದೊಂದು ನಾಟಕ' ಎಂಬ ಮೆಚ್ಚಿನ ಮಾತನ್ನು ಉಲ್ಲೇಖಿಸಿ, ಈ ಜೀವನ-ನಾಟಕದಲ್ಲಿ ಪರಮೇಶ್ವರನು ನನಗೆ 'ಜುಗಾರ' ನಾಟಕದ ಲೇಖಕಿಯಾಗುವ ಪಾತ್ರವನ್ನೊಪ್ಪಿಸಿದ್ದಾನೆ ಎಂದು ಬರೆದಿದ್ದೆ. ಆ ಕಾಲಕ್ಕೆ ಈ ಕೃತಿರಚನೆಯು ನಾಟಕದಲ್ಲಿ ಯಾರು ಯಾರು ಯಾವ ಯಾವ ಪಾತ್ರವಹಿಸುವರೆಂಬುದು ನನಗೆ ಕಂಡಿರಲಿಲ್ಲ. ಆದರೆ ಜೀವನ-ನಾಟಕದೊಳಗಿನ ನಾಟಕದ ಲಕ್ಷಣವೇ ಹೀಗಿದೆ. ಅದು ಅನೇಕರಿಗೆ ಪಾತ್ರ ಮಾಡಲು ಹಚ್ಚುತ್ತದೆ! ಜುಗಾರದ ವಿಷಯದಲ್ಲಿಯೂ ಕವಿ ಬೇಂದ್ರೆ, ಶ್ರೀ. ಮಾಸ್ತಿಯವರಂಥ ಮಹನೀಯರಿಗೂ ಮತ್ತು ಇತರ ನಟವರ್ಗದವರಿಗೂ ನನ್ನ ಹಾರ್ದಿಕ ವಂದನೆಗಳನ್ನು ಸಲ್ಲಿಸುತ್ತೇನೆ.

'ಚಾರುಸದನ',<br>
ಪುಣೆ.<br>
೧೯-೩-೧೯೫೫

**ಮುಕ್ತಾಬಾಯಿ ದೀಕ್ಷಿತ್**

# ಜೂಜು

## ಅಂಕ ೧

[ ಇಳಿಹೊತ್ತು. ಅಪ್ಪಾರಾಯರ ಮನೆಯ ಬೈಠಕ್‌ಖಾನೆ. ಸುಶಿಕ್ಷಿತ ಮಧ್ಯಮ ವರ್ಗದ ಕುಟುಂಬದ ರೀತಿಯಲ್ಲಿ ಕಾಣುತ್ತಿದೆ. ಎಡಮಗ್ಗಲು ಅಟ್ಟಕ್ಕೆ ಹೋಗುವ ಮೂರು ಪಾವಟಿಗೆಗಳು. ತೆರೆ ಮೇಲೆದ್ದ ಕೂಡಲೆ ಬೀಸುಕಲ್ಲಿನ ಗರಗರ ಸಪ್ಪಳ ಕೇಳಿ ಬರುವದರ ಜೊತೆಗೆ ಇಂದಿರಾಬಾಯಿಯವರು ಅಟ್ಟದ ಪಾವಟಿಗೆಗಳನ್ನು ಇಳಿಯುತ್ತಿರುವದೂ ಕಾಣುವದು. ಇಂದಿರಾಬಾಯಿಯವರು—ವಯಸ್ಸು ಸುಮಾರು ೪೦–೪೫, ಗಂಭೀರ ರೀವಿ, ನೀಟಾದ ಬೈತಲೆ, ಸುತ್ತು-ತುರುಬು, ಟೋಪುಸೀರೆ—ಈ ವೇಷದಲ್ಲಿ ಕಾಣುತ್ತಾರೆ. ಮುಖಭಾವ ತುಸು ಚಿಂತೆಗೊಳಗಾದವರಂತೆ ಇದೆ. ಪಾವಟಿಗೆ ಇಳಿಯುತ್ತಿರುವಾಗ ಹಿಂತಿರುಗಿ, ಅಟ್ಟದ ಕಡೆಗೆ ನೋಡಿ, ಮೇಲೆ ನಿಂತಿರುವ ಅಕ್ಕೂನನ್ನು ಉದ್ದೇಶಿಸಿ, 'ಕೆಳಗಿನ್ಯಾಕ ಬರ್‍ತೀ, ಅಕ್ಕೂ?' ಎಂದು, ಮುಖತಿರುವಿ ಕೆಳಗೆ ನೋಡುವಾಗ, ಅಕ್ಕೂನ ಪರ್ಸ್ ಹಾಗು ಕೊಡೆ ಬೇರೆ ಬೇರೆ ಎರಡು ಕುರ್ಚಿಗಳ ಮೇಲೆ ಹೇಗೋ ಒಗೆದದ್ದು ಅವರಿಗೆ ಕಾಣುತ್ತದೆ. ಆ ವಸ್ತುಗಳ ಕಡೆಗೆ ಖಿನ್ನಮನಸ್ಕರಾಗಿ ನೋಡುತ್ತಾರೆ. ಅಕ್ಕೂನ ವ್ಯಗ್ರಮನಸ್ಥಿತಿಯ ಕಲ್ಪನೆ ಬಂದು ಇನ್ನಷ್ಟು ಖಿನ್ನರಾಗುತ್ತಾರೆ. ಭಾರವಾದ ಮನಸ್ಸಿನಿಂದ ಅವನ್ನು ಎತ್ತಿ ಸರಿಯಾಗಿ ಇಡುತ್ತಾರೆ. ಕೋಚಿನ ಮೇಲೆ ಕುಳಿತು ಒಂದು ಸ್ವೆಟರ್ ಹೆಣೆಯಲು ಪ್ರಾರಂಭಿಸುವಷ್ಟರಲ್ಲಿ, ಒಳಗಿಂದ ಮನೆಗೆಲಸದವಳಾದ ನೇಮಾನ ಬೀಸುಕಲ್ಲಿನ ಮೇಲಿನ ಹಾಡು ಕೇಳಬರುತ್ತದೆ.

### ಹಾಡು

ಕಾಗೀಗಿ ಕಣ್ಣಿಟ್ಟ ಕರಿಯ ಹುಬ್ಬಿನ ಜಾಣ
ಮಾವೀನ ಹಣ್ಣು ಮನಿಯಾಗ। ಇಟಗೊಂಡು
ಸೀರಲಕ್ಯಾಕ ನೆದರಿಟ್ಟಾ

ಹೆಣ್ಣು ಹಡೆದವ್ವನ ಹೆಮ್ಮೇನು ದೊಡ್ಡದ
ಹಣ್ಣು ಬಂದಾವ ತಿನಬಾರ। ಹೆಣ್ಣೀನ
ಸರಲಿ ಬಂದಾವ ಹೊರಬಾರ

ಹಾಡೀಗಿ ಹಾಡಿಲ್ಲ ಏಡೀಗಿ ತಲೆಯಿಲ್ಲ
ಮೋಡ ಬಂದಲ್ಲಿ ಬಿಸಿಲಿಲ್ಲ । ಹೆಣ್ಣೀಗಿ
ಓಡಿಹೋದಲ್ಲಿ ಸುಖವಿಲ್ಲ

ಚಿಂತಿ ಮಾಡುವರನ ಅಂತರಿಲ್ಲದ ಗಂಗಾ
ಚಿಂತ್ಯಾಗ ಬಾಯ ಇಳಿತರ । ಮರ್ತ್ಯದಾಗ
ಸಂತೋಷದಿಂದ್ಯಾರು ಇರುವರ

ಸಾವೀರ ಕೊಟ್ಟರು ಸವತೀಯ ಮನಿಬ್ಯಾಡ
ಸಾವಿರದ ಮ್ಯಾಲ ಐನೂರು । ಕೊಟ್ಟರು
ಮಲಮಕ್ಕಳಿರುವ ಮನಿಬ್ಯಾಡ

ಇಬ್ಬರ್ಹೆಂಡರನಾದಾ ಏಡೀಯ ಮುಳ್ಳಾದಾ ।
ಕೋದಗನಾದಾ ಕೊರವಾದಾ । ಬಾಲ್ಯಾರು
ಮಾಡಿಟ್ಟ ಸಿಂಬಿ ಆರಿವ್ಯಾದಾ

ಉಡುಕೀಯ ಹೆಂಡೂತಿ ಉಡಿಯಾನ ಲಿಂಗೆಂದಾ
ಕಿರಿಬಳ್ಳು ಹಿಡಿದ ಮಡದೀಯ । ಸಂಗಾಟ
ಸಿಡಿಸೀಡಿ ಯಾಕೊ ಸಿರಿರಾಯಾ

ಪರಿಮಳದರಸರು ಪರನಾರಿಗ್ಹೋದರ
ಮುಸಿ ಮಡದಿ ಬಾಯಿ ಬಿಡಬ್ಯಾಡ । ತಾವ್ತಮ್ಮ
ಮನ ಹೇಸಿ ಮನಿಗೆ ಬರತಾರ

ಅಂಗೀಯ ಮ್ಯಾಲಂಗಿ ಛಂದೇನೊ ನನ ರಾಯ
ರಂಬಿ ಮ್ಯಾಲ ರಂಬಿ ಪ್ರತಿರಂಬಿ । ಬಂದರ
ಛಂದೇನೊ ರಾಯ ಮನಿಯಾಗ

ಗಂಡಹೆಂಡರ ಜಗಳ ಗಂಧ ತೀಡಿದ್ಹಾಂಗ
ಸಿಂಗಳ ನೀರು ಎರೆಧಾಂಗ । ಹಿರಿಹೊಳೆಯ
ಗಂಗವ್ವ ಸಾಗಿ ಹರಿಧಾಂಗ ॥

ಒಂದೊಂದು ನುಡಿ ಕಿವಿಗೆ ಬಿದ್ದ ಹಾಗೆಲ್ಲ ಇಂದಿರಾಬಾಯಿಯವರು ಹೆಚ್ಚೆಚ್ಚು ಚಿಂತಾಕುಲರಾಗುತ್ತಾರೆ. ಕೊನೆಗೆ

**ಇಂದಿರಾ:—** ನೇಮಾ, ಏ ನೇಮಾ

**ನೇಮಾ:—** ಬಂದೆನ್ರಿ. (ಕೈಮೇಲಿನ ಹಾಗು ಸೀರೆಯ ಮೇಲಿನ ಹಿಟ್ಟನ್ನು ಜಾಡಿಸುತ್ತ) ಏನೆವ್ವಾ

ಇಂದಿರಾ :— ನೇಮೂ, ಮನಿಯಲ್ಲಿ ಯಾಕ ಬೀಸ್ತ ಕೂತೀ? ಅದೂ ಬಿಸಿಲ್ಹೊತ್ತಿನೊಳಗ— ಬೀಸೋ ಗಿರಣಿ ಇಲ್ಲೇನು ಊರಾಗ?

ನೇಮೂ .— ಅಲ್ಲೆವ್ವಾ, ನಾ ಹಿಟ್ಟಲ್ಲಿ ಬೀಸ್ತದೀನಿ? ಬಾಜಾಣಿ—ಮೊನ್ನೆ ತಾವು ಹೇಳಿದ್ದಿಲ್ರಿ ಬೀಸಾಕ ತಗೀ ಅಂತ?

ಇಂದಿರಾ — ಅಂತsss ಈಗ ಬೀಸಲಿಕ್ಕೆ ತಗದೀ ಏನು?

ನೇಮೂ :— ಯವ್ವಾ, ಗಿರಣ್ಯಾಗ ಬೀಸಿದ ಬಾಜಾಣಿ ಜಿಗಟs ಇರಾಕಿಲ್ರಿ, ಮತ್ತ ಬ್ಯಾರೆ ಹಿಟ್ಟು ವ್ಯಾಲ ಕೂಡಸ್ತಾರ್ರಿ—ಮನ್ಯಾಗ ಬೀಸಿದ ಬಾಜಾಣಿ ಹ್ಯಾಂಗ ಕೈಯಾಗ ಉರೂಟಾಗಿ, ಕವ್ಮ್ಯಾಗ ಹತ್ತೈತ್ರಿ.

ಇಂದಿರಾ :— ಆದರ, ಇದು ಬೀಸೋ ಹೊತ್ತsರs ಹೊತ್ತ? ಅಕ್ಕವ್ವ ಇದs ಬಂದು ಅಡ್ಡಾಗ್ಯಾಳೋ ಇಲ್ಲೊ, ನಿನ್ನ ಬೀಸೂಕಲ್ಲು ಸುರು ವಾಗಿ ಬಿಟ್ಟsದ!

ನೇಮೂ :— (ಆನಂದಿತಳಾಗಿ) ಯವ್ವಾ, ಅಕ್ಕಾsವರು ಬಂದಾರ್ರಿ? ಇದs ಬಂದಾರ್ರಿ? ಯಾವಾಗ ಬಂದರೂ ಸಣಿವಾರಕ್ಕೊಮ್ಮೆ ಬರsವರು! ಬಂದಾರು ಅಂತೀರಿ, ಮತ್ತ ಅದಾರೆಲ್ರಿ?

ಇಂದಿರಾ :— ವ್ಯಾಲ ಅಟ್ಟದ ವ್ಯಾಲ, ನನ್ನ ಖೋಲ್ಯಾಗ. ಬಿಸಲು ಮಾಡಿ ಕೊಂಡು ಬಂದ್ಲು. ಅದಕ್ಕs ತುಸುಹೊತ್ತು ಮಲಗು ಅಂದೆ ಖೋಲ್ಯಾಗ.

ನೇಮೂ :— ತವರಮನಿ ಆಸರಕ್ಕ ಮಗಳು ಹೊಂಟರ, ಆ ಕಂದಮ್ಮಗ ಬಿಸಲೂ ಬಡಿಯೂದಿಲ್ಲ, ಮಳೀನೂ ಹತ್ತೂದಿಲ್ಲ. ನನ್ನ ತಾಯವ್ವ ಹಾಡ್‌ತಿದ್ಲು—

**ಹಾಡು**

**ಹೆಚ್ಚೇದ ಮಾತೀಗಿ ಹರಿವ ಗಂಗ್ಯೆರಡಾಗಿ**
**ಇಚ್ಛ್ಯಾಳ್ಯ ಮನವು ವಿಷವಾಗಿ । ಒಳಗೊಳಗ**
**ಹಚ್ಚಿದವರ್ಯಾರ ಕದನವ**

**ಬ್ಯಾಸಿಗಿ ದಿವಸಕ ಬೇವಿನ ಮರತಂಪ**
**ಭೀಮರತಿಯೆಂಬ ಹೊಳಿತಂಪ । ಹಡದಮ್ಮ**
**ನೀ ತಂಪ ನನ್ನ ತವರೀಗಿ**

ಅರಗಿನಂಥ ತಾಯಿ ಮರದಂಥ ಮಕ್ಕಳು
ಕರಗಿದರ ಬೆಣ್ಣಿ ತಿಳಿದುಪ್ಪ । ದಂಥಕಿ
ಕರಗಂಥ ತಾಯಿ ಇರಬೇಕ

ಯಾರ ಇದ್ದರು ನನ್ನ ತಾಯವ್ವನ್ಹೋಲರ
ಸಾವಿರ ಕೊಳ್ಳಿ ಒಲಿಯಾಗ । ಇದ್ದರ
ಜ್ಯೋತಿ ಸಿನ್ಯಾರ ಹೋಲರ

ತಂದೀಯ ನೆನೆದರ ತಂಗಳ ಬಿಸಿಯಾಯ್ತು
ಗಂಗಾದೇವಿ ನನ್ನ ಹಡೆದವ್ನ । ನೆನೆದರ
ಮಾಸಿದ ತಲೆಯು ಮಡಿಯಾಯ್ತು

(ನೇಮಾ ಅಟ್ಟದ ಮೇಲೆ ಹೋಗುತ್ತಾಳೆ. ಇಂದಿರಾಬಾಯಿ ಎದ್ದು ಕಿಟಕಿಯೊಳಗಿಂದ ಹೊರಗೆ ನೋಡುತ್ತಾರೆ; ಮತ್ತೆ ಬಂದು ಸ್ವೆಟರ್ ಹೆಣೆಯುತ್ತ ಕೂಡುತ್ತಾರೆ. ಅವರು ಯಾರ ಬರುವಿಕೆಗಾಗಿಯೋ ಏನೋ ಆತುರರಾಗಿದ್ದಾರೆ. ಅಷ್ಟರಲ್ಲಿ ನೇಮಾ ಅಟ್ಟವನ್ನಿಳಿದು ಕೆಳಗೆ ಬರುತ್ತಾಳೆ.)

**ನೇಮಾ:—** ಸೆಟಗೊಂಡಾಂಗೈತ್ರಿ.

**ಇಂದಿರಾ:—** ನಿದ್ದಿ ಹತ್ತ್ಯಾದೇನs ಅಕ್ಕವ್ವಗ?

**ನೇಮಾ:—** ಇಲ್ಲೆವ್ವಾ. ಬೇಶಂಗ ಕಣ್ಣು ತಗದು, ಬಾವೀಕಡ್ಯಾಕ ನೋಡ್ತ ಬಿದ್ದುಕೊಂಡಾರ್ರಿ; ಕೇಳಿದರ ಮಾತs ಆಡವಲ್ಲರ್ರಿ. ಡಾಗದಾರ ಸಾಬರ ಮ್ಯಾಲ ಸೆಟಗೊಂಡು ಬಂದಾರೊ ಏನೊ ಬಿಡೆವ್ವಾ! ಚೆಂಜಿಗೆ ಡಾಗದಾರಸಾಬರು ಬಂದು ಸನಮಂತ ಮಾಡಿದರೂ ಅಂದರ—ಆಗೇ ಆಕ್ಯಾರ ಸನಮಂತ—ಆಗ ಮಾತೂ ಆಡ್ತಾರು, ನಕ್ಕೂ ನಗತಾರು! (ಒಳಗೆ ಹೋದಂತೆ ಮಾಡಿ ಪುನಃ ತಿರುಗಿ ಬಂದು) ಯವ್ವಾ, ಏನೈತ್ಯೊ ಏನ್ರ್ಯೊ, ಈಚೇಚ್ಯಾಗ ಅಕ್ಕಾವರು ಬಾಯೀ ಸಿಟ್ಟಿಗೇಳತಾರ್ರಿ, ಮತ್ತ ಮಾತೂ ಆಡಾಣಿಲ್ರಿ ಮುಂಚಿನಂಪಾಗ! ಅದs ಸಣ್ಣವರಿದ್ದಾಗ ಬಲು ಮಾತಾಡತಿದ್ದರ್ರಿ—ಯವ್ವಾ, ನಾ ತುಸಾ ಬಾಯಿ ಬಿಗಿಹಿಡಿದೆನೊ ಇಲ್ಲೊ, 'ನೇಮಾ ಮಾತಾಡs, ಮಾತಾಡs' ಅಂತ ದುಂಬಾಲಬೀಳವರ್ರಿ: ನಾ ಆಗ ಅವರಿಗೆ

'ಸಣ್ಣಾಕಿರೋತನಕ ಏನು ಮಾತಾಡೋದೆಲ್ಲಾ ಮಾತಾಡಿಕೋ ನನ ಮಗಳ! ಗಂಡನ ಮನೀಗೆ ಹೋದಮ್ಯಾಲ ಮಾತಾಡಾಕೂ ಸಿಗಾಣಿಲ್ಲ' ಅಂತಿದ್ದೆನ್ರಿ. ಮತ್ತ ಯವ್ವಾ....

ಇಂದಿರಾ.— (ಕಣ್ಣೊರಸಿಕೊಳ್ಳುತ್ತ) ನೇಮಾ, ಎಷ್ಟು ಮಾತಾಡ್ತೀಯೆ? ನಾಕುಮಾಡು ನಿನ್ನ ಮಾತು. ಬಾಜಾರಕ್ಕ ಹೋಗಬೇಕಾಗಿತ್ತಲ್ಲs ನಿನಗ? ನಡವs ಬೀಸೋದೊಂದು ತಕ್ಕೊಂಡು ಕೂತಿ?

ನೇಮಾ:— (ಇಂದಿರಾಬಾಯಿಯ ಮಾತಿನ ಕಡೆಗೆ ಲಕ್ಷ್ಯಕೊಡದೆ) ಯವ್ವಾ, ಅಕ್ಕವ್ವನ ಮದಿವ್ಯಾಗಿ ಏಳೆಂಟು ವರ್ಸಾದವು. ಅತ್ತೀಮನ್ಯಾಗ ಅತ್ತೀನೂ ಇಲ್ಲ, ಮಾವನೂ ಇಲ್ಲ. ಇಬ್ಬರs ಅದಾರ್ರಿ ರಾಜಾರಾಣಿ! ಮತ್ತ, ಯಾಕ ಹಿಂಗ ನಡಕೊಂತಾರ್ರಿ ಯವ್ವಾ?....

(ಇಂದಿರಾಬಾಯಿಯ ಲಕ್ಷ್ಯ ಇಲ್ಲದ್ದನ್ನು ನೋಡಿ)

ನಾ ಏಟೊತ್ತಿನಿಂದ ಮಾತಾಡ್‌ತೀನಿ. ಯವ್ವಾ, ನಿಮ್ಮ ಚಿತ್ತ ಯತ್ಲಾಗೋ ಐತಿ ಬಿಡ್ರಿ.

ಇಂದಿರಾ:— ನೇಮಾ ಇರಲಿ, ನೀ ಇನ್ನ ಹೋಗು; ಅಂದರ ಸಂಜಿಯೊಳಗಾಗಿ ತಿರಿಗ್ಯಾದರೂ ಬಂದೀ.

ನೇಮಾ:— ಮತ್ತ ಬೇಬವ್ವ ಎಲ್ಲಿ ಬಂದಾರ್ರಿ ಇನ್ನೂ? ಆವರು ಬಂದರು ಅಂದರ, ಅಕ್ಕತಂಗೇರ ಚಾ ಮುಗಿಸಿ ಹೋಗತೀನಿ ಪ್ಯಾಟ್ಯಾಗ.

ಇಂದಿರಾ:— ಬ್ಯಾಡ ನೇಮಾ, ಈಗs ಹೋಗು. ಬೇಬೀ ಬರಲಿಕ್ಕೆ ತಡಾ ಆದರೂ ಆದೀತು. ಆಕಿ ಇವತ್ತೊಂದು ಸಭಾಕ್ಕ ಹೋಗ್ಯಾಳ. (ತಿಳಿವಳಿಕೆ ಹೇಳುವ ಸ್ವರದಲ್ಲಿ) ಹೋಗು ನೇಮಾ, ಹೋಗು.

ನೇಮಾ:— ಅಯ್‌ಶಿವನ! ನಮ್ಮವ್ವ ನನ್ನ ಮಾತಾಡಾಕs ಕೊಡವಳ್ಳು!

[ಹೋಗುತ್ತಾಳೆ. ಅಷ್ಟರಲ್ಲಿ ಬೇಬೀ ಧಡಿಲ್ಲನೆ ಬಾಗಿಲು ತೆರೆದು ಒಳಗೆ ಬರುತ್ತಾಳೆ. ಆಕೆ ೨೧–೨೨ ವಯಸ್ಸಿನವಳಿದ್ದು, ಅಪ್-ಟು-ಡೇಟ್ ಕಾಲೇಜಿನ ತರುಣಿಯ ವೇಷದಲ್ಲಿ, ಒಂದು ಸಭೆಯನ್ನು ಜಯಿಸಿದ ಉತ್ಸಾಹದಲ್ಲಿ ಬರುತ್ತಾಳೆ.]

**ಇಂದಿರಾ :—** (ಹೆಣೆಯುತ್ತ) ಮುಗೀತೇನು ಸಭಾ?

**ಬೇಬಿ :—** ಹುಂ. ಮೂರು ನಾಲ್ಕೇ ಭಾಷಣಗಳಾದವು. ಅದರಲ್ಲಿ ಮಹತ್ತ್ವದ ಭಾಷಣ ನಾ ಮಾಡಿದೆ. ಅದನ್ನ ಮಾಡ್‌ತಿರುವಾಗ ಅಕ್ಕನ ಎಂಥ ಕರುಣಚಿತ್ರ ನನ್ನ ಕಣ್ಣೆದುರಿನಲ್ಲಿತ್ತು! ಗಂಡ ಬಿಟ್ಟ ಆಕಳ ಸ್ವಭಾವದ ಅಕ್ಕ. ಇವತ್ತಿನ ನನ್ನ ಭಾಷಣ ಕೇಳ ಲಿಕ್ಕೆ ಅವ್ವಾ, ನೀ ಬರಬೇಕಾಗಿತ್ತು. ಯಾಕ ನೀ ಬರಲಿಲ್ಲವ್ವಾ?

**ಇಂದಿರಾ :—** ನಾ ಎಂದsರೆ ಸಭಾಕ್ಕ ಹೋಗ್‌ತಿರ್ತೀನೇನು?

**ಬೇಬಿ :—** ನನ್ನ ಭಾಷಣ ಕೇಳಿದನಂತರ ಬ್ಯಾರೆ ಯಾವ ಸ್ತ್ರೀಗೂ ಅದನ್ನ ವಿರೋಧಿಸಿ ಮಾತಾಡೋದು ಶಕ್ಯ ಇರಲಿಲ್ಲ. ಇಷ್ಟೊಂದು ಪ್ರಚಂಡ ಬಹುಮತದಿಂದ ದ್ವಿಭಾರ್ಯಾಪ್ರತಿಬಂಧಕ ಕಾನೂನಿಗೆ ಬೆಂಬಲಕೊಡುವ ಗೊತ್ತುವಳಿಯನ್ನ ನಾವು ಪಾಸ್ ಮಾಡಿದೆವು. ಇನ್ನ ಇದು ಕಾನೂನಾಗದೆ ಎಂದೂ ಉಳಿ ಯೋದಿಲ್ಲ. ಇಂದಿನ ಸಭೆಯ ಮಹತ್ತ್ವ, ಅವ್ವಾ, ನಿನಗಾ ದರೂ ವಿಶೇಷ ಅನಿಸಬೇಕಾಗಿತ್ತು. ಈ ಗಂಡಸರು ಬೇಕಾ ಧಾಂಗ, ಇದ್ದ ಹೆಂಡರ್ನ ಬಿಟ್ಟು, ಎರಡನೇ ಮದಿವಿ ಮಾಡಿ ಕೋತಾರ! ಹೆಂಗಸರು ಅಂದರ ನಿರ್ಜೀವ ಆಟಿಗಿ ಅಂತ ತಿಳಿದಾರೇನೊ! ಬೇಕಾದಷ್ಟು ದಿವಸ ಆಟಾ ಆಡಬೇಕು, ಬ್ಯಾಸರ ಬಂದಕೂಡಲೆ ಬಿಸಾಡಿಬಿಡಬೇಕು. ಇಂಥ ಗಂಡಂದಿರು ಮಾಡೋ ಈ ಅನ್ಯಾಯಕ್ಕ ಯಾರಾದರೂ ಕೈಹಿಡಿದು ಕೇಳೋದು ಬ್ಯಾಡ?

**ಇಂದಿರಾ :—** ಹೌದು, ಬೇಕು! ಬರೆ ಕೇಳಿ ಸಿಗೋದೇನು ನಿನಗ? ಮತ್ತ ಯಾವ್ಯಾವ ಮಾತಿಗೆ ಅಂತ ನೀ ಅವರ್ನ....

**ಬೇಬಿ :—** ಉಳಿದ ಮಾತು ಬಿಟ್ಟರೂ, ಒಂದು ಮಾತಿಗಾದರೂ ನೀ ಕೇಳೀಯೊ ಇಲ್ಲೊ? ಅದರ ಪ್ರತ್ಯಕ್ಷ ಝಳ ನಿನ್ನ ಮಸೀಗೂ ಬಂದು ಬಡಕೊಂಡದ! ಹೊಟ್ಟೀಲೆ ಹುಟ್ಟಿದ ಮಗಳ ಸಂಸಾರಕ್ಕ ಬೆಂಕಿ ಹತ್ತಿದರೂ, ಇನ್ನೂ ನಿನಗ ಏನೂ ಮಾಡ ಬೇಕು ಅಂತ ಅನಿಸವಲ್ಲದು ಅವ್ವಾ?

ಇಂದಿರಾ:— ನಿನ್ನ ಮಾತು ಕೇಳಿ ನನಗ ಸೋಜಿಗಾಗ್ತದ ಬೇಬಿ. ಅಕ್ಕೂನ ಸಂಸಾರ ಮುಳುಗೋ ಹೊತ್ತು ಬಂದರ, ನನಗ ಸಂಕಟ ಆಗದs ಇದ್ದೀತs?

ಬೇಬಿ:— ಇರೋದಿಲ್ಲ ಖರೆ. ಅದರ ಸಂಕಟಾದದ್ದು ಬರೆ ಸಹನಮಾಡಿ ಕೋತ ಕೂತರ, ಅದರ ಪ್ರತೀಕಾರ ಮಾಡಿಧಾಂಗಾತೇನು? ಅದಕ್ಕಾಗಿ ಜನಮತ ಜಾಗ್ರತಗೊಳಿಸಬೇಕು; ಚಳವಳಿ — ಸುರುಮಾಡಿ ಕಾಯದೇದ ಆಧಾರಪಡೀಬೇಕು.

ಇಂದಿರಾ:— ಕಾಯದೆಮಾಡಿ ಎಲ್ಲ್ಯಾದರೂ ಜನರ ಕಷ್ಟ ನಿವಾರಣೆ ಆಗ್‌ತಿರ್ತಾವ? ಇಷ್ಟೊಂದು ಕಾಯದೆಗಳಿದ್ದರೂ ಮನುಷ್ಯನ ದುಃಖೇನೂ ತಪ್ಪಿಲ್ಲ!

ಬೇಬಿ:— ಹೋಗಲಿ. ಕಾಯದೇದ ಮ್ಯಾಲ ನಿನ್ನ ವಿಶ್ವಾಸ ಇಲ್ಲದಿದ್ದರ ಬಿಡು. ಯಾವದರ ಮ್ಯಾಲ ನಿನ್ನ ವಿಶ್ವಾಸದ, ಅವನ್ನಾದರೂ ಮಾಡು. ಅಕ್ಕನ ಸಲುವಾಗಿ ಏನಾದರೂ ಖಟಪಿಟ ಮಾಡೋದು ಬ್ಯಾಡ? ಕಾಣಾಕಾಣಾ ಹೊಟ್ಟೀ ಮಗಳ ಪ್ರಾಣ ಹೋಗೋ ಹೊತ್ತು ಬಂದರೂ, ಅದನ್ನ ನೋಡ್ತ ಥಣ್ಣಗ ನೀ ಕೂತೀ ಹ್ಯಾಂಗs ಅಂತಿನ್ನಾ. ಅಕ್ಕನ ಜೀವನ ಹೀಂಗಾಗೋದs, ಆ ವಸಂತರಾಯನ ಜೀವಕ್ಕs ಏನಾರ..

ಇಂದಿರಾ:— ಆಂ, ಬೇಬೀ!

ಬೇಬಿ:— ನೋಡಿದ್ಯಾ, ಇಂಥ ಅಶುಭ ಬರೀ ಆಡಿದ್ದು ಕೂಡ ನಿನಗ ಕೇಳೋದಾಗೋದಿಲ್ಲ! ಮತ್ತ ಈಗ ನಡದದ್ದೇನು ಕಮ್ಮಿ ಅಶುಭ ಇದ್ದೀತs ಹಂಗಾರ?

ಇಂದಿರಾ:— ಬೇಬಿ, ಮೆತ್ತಗ ಮಾತಾಡು. ಅಕ್ಕೂ ಅಟ್ಟದ ಮ್ಯಾಲ ಎಚ್ಚರಿದ್ದಾಳ. ಸುಂದು ಬಡದು ಬಿದ್ದುಕೊಂಡಾಳ. ಆಕೀ ಕಿವೀಗೆ ಮುಟ್ಟೋಹಾಂಗ ಈ ಚರ್ಚಾ ಯಾಕ?

ಬೇಬಿ:— ಹಂಗಾರ ಎಷ್ಟು ದಿವಸ ನಾವು ಹಿಂಗ ಬಾಯಿಗೆ ಬೀಗ ಹಾಕ್ಕೊಂಡು ಕೂಡಬೇಕು ಅಂತೀ? ಖರೇವಾಗಿ ನೋಡಿದರ, ಅಕ್ಕನs ಇನ್ನಮ್ಯಾಲ ಸುಮ್ಮನೆ ಕೂಡತಕ್ಕದ್ದಲ್ಲ.

**ಇಂದಿರಾ:—** ಖರೆ ಅದ. ಅಕ್ಕನ ಜೀವನದ ಈ ಪ್ರಶ್ನೀನ ಅಕ್ಕನs ಬಿಡಿಸಲಿಕ್ಕೆ ಬೇಕು.

**ಬೇಬಿ:—** ಒಳ್ಳೇದು. ಅಕ್ಕ ಈ ಪ್ರಶ್ನೆ ಬಿಡಿಸಲಿಲ್ಲ. ಅಂತ, ನೀನೂ ಏನೂ ಮಾಡದೆ ಸ್ವಸ್ಥ ಕೂಡೋ ಆಕೇನು ಹಂಗಾರ? ಅವ್ವಾ, ಅಕ್ಕನ ಮದಿವೀ ಹೊತ್ತಿನ ಪ್ರಸಂಗ ನಿನ್ನ ನೆನಪಿಗೆ ಬರ್ತs ದಲ್ಲs? ಅಕ್ಕನ ಒಲವು ಆಗ ವಸಂತರಾಯನ ಕಡೆಗಿತ್ತು. ಆದರ ಅಪ್ಪಗ ಆ ವರ ಒಪ್ಪಿಗಿರಲಿಲ್ಲ. ಆಗ ಅಪ್ಪಗ ನೀನು ಖಂಡಿತ ಹೇಳಲಿಲ್ಲs? ವಸಂತರಾಯರು ಎಷ್ಟೇ ಬಡವ ರಿದ್ದರೂ, ಅಕ್ಕನಿಗೆ ಯಾವಾಗ ಒಪ್ಪಿಗಾಗೇದ ಅಂದಮ್ಯಾಲ, ಅಕ್ಕನ ಮದಿವಿ ಅವರ ಜೋಡಿಗೇ ಆಗಲಿಕ್ಕೆ ಬೇಕು ಅಂತ! ಆಗ ಹಾಂಗ ಖಡಾಖಂಡಿತ ಹೇಳಿದ ನೀನು, ಈಗ ಹ್ಯಾಂಗ ಸುಮ್ಮಗ ಕೂಡ್ತೀ ಅಂತೀನ್ನಾ? ಹೀಂಗಾದರ ಅಕ್ಕನ ಸುಖದ ಈ ಪ್ರಶ್ನಿ ಬಿಡೋಧ್ಯಾಂಗ?

**ಇಂದಿರಾ:—** ಯಾರಂತಾರ ಬಿಡೋದದ ಅಂತ? ಮತ್ತ ನಾ ಕೈ ಮುಚ್ಚಿ ಕೊಂಡು ಥಣ್ಣಗ ಕೂತೀನಿ ಅಂತ ನಿನಗ ಖರೇವಾಗಿ ಅನಸ್ತs ದೇನು, ಬೇಬಿ? ಬೇಬೀ, ನಮ್ಮ ಆಯುಷ್ಯದಲ್ಲಿ ಘಟಿಸುವ ಎಲ್ಲಾ ಪ್ರಸಂಗ, ಪ್ರಯತ್ನಾಧೀನ ಇರ್ತಾವ ಅಂತಲ್ಲ. ಪ್ರಯ ತ್ನಕ್ಕೂ ದೈವದ ಬೆಂಬಲ....

**ಬೇಬಿ:—** ಜನ ಕಾಣಾ-ಕಾಣಾ ಅನ್ಯಾಯ ಮಾಡ್ತದ. ಅದರಲ್ಲಿ ದೈವೇನು ಬಂತು? ನನಗಂತೂ ಈ ದೈವವಾದ ಅರ್ಥನs ಆಗೋದಿಲ್ಲ!

**ಇಂದಿರಾ:—** ಈಗ ನಿನಗ ಇಪ್ಪತ್ತೊಂದು ವರ್ಷ, ಇನ್ನ ಇಪ್ಪತ್ತೊಂದು ವರ್ಷ ಆದವು ಅಂದರ ಅರ್ಥಾಗ್ತದ!

**ಬೇಬಿ:—** ಹುಂ, ಇಂಥಾ ಆಶೀರ್ವಾದ ನನಗ ಬ್ಯಾಡ. ನಾನೇಂದೂ ದೈವಕ್ಕ ದೋಷಕೊಟ್ಟು ಕೂಡೋ ಆಕಿ ಅಲ್ಲ ನೋಡು! ಪ್ರಯತ್ನ ಮಾಡಬೇಕು ಅಂಬೋದು ನನಗ ಅರ್ಥಾಗ್ತದ.

**ಇಂದಿರಾ:—** ನನಗ ಸಾಧ್ಯ ಇದ್ದದ್ದನ್ನೆಲ್ಲಾ ನಾ ಮಾಡ್‌ತಲೇ ಇದ್ದೀನಿ. ಹಾಂಗಿರದಿದ್ದರ, ಕಾಗದಾ ಬರದು ಶ್ರೀಕಾಂತನಿಗ್ಯಾಕ ಬರ ಹೇಳ್ತಿದ್ದೆ?

ಬೇಬಿ :— ಅವನ ವ್ಯಾಲಾದರೂ ನೀ ಯಾಕಿಷ್ಟು ಅವಲಂಬಿಸಿ ಕೂಡ್ತೀ? ಈಗ ಇಷ್ಟೊಂದು ಅವನ ಹಾದೀ ಕಾಯುತ ಕೂತೀ...... ಬಂದಾನೇನವ? ಯಾಕ ಅವನ ಸಲುವಾಗಿ ಕಾಯಬೇಕೋ ಕಾಣೆ.

ಇಂದಿರಾ .— ಇಂಥ ಹೊತ್ತಿಗೆ ಅವನ ಹಾದೀ ಕಾಯಲೇ ಬೇಕು.

ಬೇಬಿ :— ಹುಂ, ಅಂವ ಆದರೂ ಬಂದು ಏನುಮಾಡಬೇಕಂತಿದ್ದಾನ? ಅಪ್ಪನ್ಹಾಂಗ ನರಸಿಂಹಾವತಾರ ತಾಳೋ ಹಾಂಗಿಲ್ಲೇನು ಬ್ಯಾರೆ? ಮೇಲಾಗಿ ಅಕ್ಕನ ಗಂಡ ಅಂದರ ಅವನ ಪರಮಮಿತ್ರ.

ಇಂದಿರಾ :— (ನಕ್ಕು) ಹಂಗಾರ ನಿನ್ನ ಅಣ್ಣನ ಸ್ವಭಾವದ ಅರಿವು ನಿನಗಾಗೇ ಇಲ್ಲ ಅಂಥಾಂಗಾತ್ಯು. ನಿಜವಾಗೇ ಒಬ್ಬರಿಂದ ಅನ್ಯಾಯ ಆಗ್ತದ ಅಂದರ, ಅವರು ಬೇಕಾದವರಿರಲಿ, ಶ್ರೀಕಾಂತ ತಡಕೊಳ್ಳುವವನಲ್ಲ.

ಬೇಬಿ :— ಅಂವ ಏನು ಮಾಡ್ತಾನ ಹೇಳಲೇನು ನಿನಗ? ಯಾರಿಗ್ಗೊತ್ತು ಏನು ಮಾಡ್ತಾನೊ? ನನಗೂ ಅವನ ನಡವಳಿಕೀದು ಇದು ವರೆಗೆ ಅರ್ಥಾಗಿಲ್ಲ! ಹುಂ, ಇಷ್ಟು ಮಾಡಬಹುದು. ವಸಂತ ರಾಯರು ಎಂಥ ಅವಿಚಾರ ಮಾಡ್ತಿದ್ದಾರಂಬೋದನ್ನ ಅವರಿಗೆ ಮನವರಿಕೆ ಮಾಡಿಕೊಡಬಹುದು. ಆದರ ಇಂಥಾ ಪ್ರಸಂಗದಿಂದ ಒಪ್ಪಿಸೋ ಗಿಪ್ಪಿಸೋ ಪ್ರಶ್ನೀನಽ ಇಲ್ಲ. ಇವರಿಗೆ ಬಡಿಗೀಕಾಯಕಾನೇ ಮದ್ದು!

ಇಂದಿರಾ :— ಬೇಬಿ, ಮನಸ್ಸಿನ ಪರಿವರ್ತನ ಆಗೋದು ನಮಗ ನಿಜವಾಗಿ ಬೇಕಾಗಿದ್ದರ, ದಂಡನೆಮಾಡಿ ಅಥವಾ ಕಾಯಿದೆಮಾಡಿ ಹ್ಯಾಂಗಾದೀತು? ಅದಕ್ಕ ಹೃದಯಸ್ಥ ಪರಮೇಶ್ವರನ್ನಽ ನಾವು ಎಚ್ಚರಿಸಬೇಕು!

ಬೇಬಿ :— ಆಹಾ! ಹೃದಯಸ್ಥ ಪರಮೇಶ್ವರ! ಅವನ್ನ ಎಚ್ಚರಿಸೋದು! ಅವ್ವಾ, ನನಗನಿಸ್ತದ, ಜಗತ್ತು ನಿರ್ಮಾಣಮಾಡುವ ಮುಂದ ಬಹಳ ಧಾವತಿ ಆದದ್ದರಿಂದ ಆ ನಿನ್ನ ಪರಮೇಶ್ವರ ತುಂಬ ದಣಿದುಬಿಟ್ಟ, ಮತ್ತ ಕಾಯಮ್ಮಾಗಿ ಶಯನ ಹಾಕಿಬಿಟ್ಟ!

ಇಂದಿರಾ:— ಆಗಲಿ, ಹಾಂಗs ಅಂದುಕೊ. (ಸಣ್ಣ ದನಿಯಲ್ಲಿ) ಬೇಬೀ, ಸಪ್ಪತ್ತ ಮಾಡದs ಮ್ಯಾಲ ಹೋಗಿ, ಅಕ್ಕೊ ಏನು ಮಾಡ್ತಾಳೋ ನೋಡಿಬಾ.

(ಬೇಬೀ ಹೋಗುತ್ತಾಳೆ. ಶ್ರೀಕಾಂತ ಬರುತ್ತಾನೆ. ಅವನು ಸುಮಾರು ೩೫ ವರ್ಷದ ತರುಣ. ಅವನಲ್ಲಿ ಗಾಂಭೀರ್ಯ ಹಾಗೂ ಹುಡುಗಾಟಿಕೆಯ ವೃತ್ತಿಯ ಸುಂದರ ಸರಿಬೆರಕೆ ಕಾಣುತ್ತದೆ.)

ಶ್ರೀಕಾಂತ:—ಕಕ್ಕೀ! ನಮಸ್ಕಾರ ಮಾಡ್ತೀನಿ. (ಮುಂದೆ ಬಂದು ನಮಸ್ಕಾರ ಮಾಡುತ್ತಾನೆ.)

ಇಂದಿರಾ:— ಯಾರು? ಶ್ರೀಕಾಂತ! ನನ್ನ ಕಾಗದ ಮುಟ್ಟಿತೋ ನಿನಗ? ನಿನ್ನ ದಾರೀ ಎಷ್ಟೊಂದು ಕಾಯುತಾ ಇದ್ದೆ ಅಂತೀ!

ಶ್ರೀಕಾಂತ:—ಏನಾದರೂ ನಾನು ಬರುವವನೇ ಇದ್ದೆ, ಕಕ್ಕಿ.

ಇಂದಿರಾ:— ಹೀಂಗೇನು? ಯಾಕ? ಕೂಡಲ್ಲ.

ಶ್ರೀಕಾಂತ:—ಯಾಕಂದರ, ಇತ್ತೀಚಿಗೆ ಪತ್ರಿಕೆಯೊಳಗ ಬೇಬಿಯ ಹೆಸರು ಬಹಳ ಓದತಾ ಇದ್ದೆ. ಆಕೇನೊ ದ್ವಿಭಾರ್ಯಾಪ್ರತಿಬಂಧಕ ಕಾಯದೆಯ ಪುರಸ್ಕರ್ತರಲ್ಲಿ ತುಂಬ ಮುಂದಾಳ್ತನ ವಹಿಸ್ಯಾಳಂತಲ್ಲ?

ಇಂದಿರಾ:— ಹೌದು, ಮಹಾರಾಯಾ, ಇತ್ತ ಈ ವಸಂತರಾಯರ ಪ್ರಕರಣ, ಅತ್ತ ನಮ್ಮ ಬೇಬಿಯ ಖಾರ ಖಾರ ಭಾಷಣ....

ಶ್ರೀಕಾಂತ:—ಅಂದರ ಆಕಿಯ ತಾಯಿ ಸಹಿತ ಸವತೀ ಮ್ಯಾಲs ಬಂದಾಕಿ ಅಂತ ಆಕೀಗೆ ನೀ ಇನ್ನೂ ಗೊತ್ತುಮಾಡಿಕೊಟ್ಟೀ ಇಲ್ಲೇನು? ಈ ಚಳುವಳಿಯಲ್ಲಿ ಆಕೆಯ ಹೆಸರು ಓದಿ, ನಾನಂತೂ ಚಕಿತನಾದೆ, ಕಕ್ಕಿ! ಅದಕ್ಕs ಒಮ್ಮೆ ಇಲ್ಲೀವರೆಗೆ ಬಂದು....

(ಬೇಬಿ ಅಟ್ಟದ ಮೇಲಿಂದ ಕೆಳಗೆ ಬರುತ್ತಾಳೆ.)

ಇಂದಿರಾ:— ಮೆಲ್ಲಗ, ಶ್ರೀಕಾಂತ. ಬೇಬೀ ಬಂದ್ಲು....

ಬೇಬಿ:— ಯಾತಕ್ಕ ಅಕ್ಕನಕಡೆಗೆ ನನ್ನ ಕಳಿಸಿದ್ದೆವ್ವಾ? ಆಕಿ ಅಂತೂ ಬಾಯಿಬಿಕ್ಕೊಂಡು ಮೂಕೀಹಾಂಗ ಮಲಗಿಬಿಟ್ಟಾಳ!

(ಶ್ರೀಕಾಂತನನ್ನು ನೋಡಿ) ಅಯ್! ದಾದಾ! ಯಾವಾಗ ಬಂದ್ಯೊ? ನನಗ್ಯಾಕೋ ತಿಳಿಸಲಿಲ್ಲ? ತಿಳಿಸಿದ್ದರ ಸ್ಟೇಶನಕ್ಕ ಬರ್ತಿದ್ದಿಲ್ಲೇನು ನಿನ್ನ ಕರಕೊಂಡು ಬರಲಿಕ್ಕೆ?

**ಶ್ರೀಕಾಂತ:**—(ಚೇಷ್ಟೆಯ ರೀತಿಯಲ್ಲಿ) ಓಹೊ, ಬರ್ತಿದ್ದೆಲ್ಲ! ಆದರ, ಗಾಡಿ ಹಗಲು ಬರೋದಿತ್ತು. ಅಂದವ್ಯಾಲ ಜತಿಗಿಲ್ಲದ ಮನಿ ಮುಟ್ಟತೀನಿ ಅಂತ ತಿಳಿಸಲಿಲ್ಲ! (ಗಡಿಯಾರದ ಕಡೆಗೆ ನೋಡಿ) ಬೇಬೀ, ಈ ಹೊತ್ತಿಗೆ ನೀ ಮನಿಯೊಳಗ ಹ್ಯಾಂಗ?

**ಬೇಬಿ:**— ಅಂದರ? ಈ ಹೊತ್ತಿಗಂದರೇನೊ?

**ಶ್ರೀಕಾಂತ:**—ಇಲ್ಲ, ಅಂದರ ಇನ್ನೂ ಕತ್ತಲೆಲ್ಲೆ ಆಗೇದ? ಕತ್ತಲಿಗಂಜಿ ಲಗೂ ಮನೀಗೆ ಬರೋದು ಅಂದರ ಅದು ಕಕ್ಕೀ ಕಾಲದ ಹಳೇ ಪುರಾಣಪದ್ಧತಿ ಆತ್ಯು!

**ಬೇಬಿ:**— ಹೌದು, ನಾವು ಬರುವರು ಅಲ್ಲಾ, ಕತ್ತಲಾಗೋ ಮೊದಲು! ನಿಮಗ್ಯಾಕ ಇಷ್ಟು ಮೆಣಸಿನಕಾಯಿ ಮುರಧಾಂಗಾಗತದೊ? ನಾವು ಈಗೀಗ ಎಲ್ಲೋ ತುಸು ಸ್ವತಂತ್ರವಾಗಿ ಗಂಡಸರ ಕಾವಲಿಲ್ಲದು, ವರ್ತಿಸಲಿಕ್ಕೆ ಪ್ರಾರಂಭಮಾಡಿದರ, ಆಗಲೆ ನಿಮ್ಮ ಎದಿಯೊಳಗ ನಡುಗು ಹುಟ್ಟಿತು! ನಿಮಗ, ಪುರುಷರಿಗೆ ಅನಸ್ತಿರ್ರ್ತದ....

**ಶ್ರೀಕಾಂತ:**—(ಅವಳ ಕಡೆಗೆ ದೃಷ್ಟಿಸಿ ನೋಡುತ್ತ ಚೇಷ್ಟೆಯ ದನಿಯಲ್ಲಿ) ಏನು ಕಕ್ಕೀ, ಈಕಿ ಯಾವದರ ಸಭಾದಾಗ ಭಾಷಣಾ ಮಾಡಿ ಬಂದಾಳೋ ಏನು? ಈಕಿಯ ವೇಷ-ಭೂಷಣ ನೋಡಿದರ ಹಾಂಗು ಕಾಣಿಸ್ತದ ಮಾತ್ರ! ಕಕ್ಕಿ, ನೀನು ಹೋಗಿದ್ದೇನು ಮತ್ತ ಆ ಸಭಾಕ್ಕ?

**ಬೇಬಿ:**— ನಿನ್ನ ಕಕ್ಕೀ; ಮತ್ತ ಸಭಾಕ್ಕು? ಅಂಹಂ, ಆಕಿ ಮನ್ಯಾಗ ನನ್ನ ಸಲುವಾಗಿ ಸ್ವೆಟರ್ ಹೆಣೀತಾ ಕೂತಾಳ! ನನ್ನ ಎರಡು ತಿಂಗಳ ಚಳೀದು, ಆಕೀಗೆ ಅದೆಂಥ ಚಿಂತಿ? ಇತ್ತ, ಅಕ್ಕನ ಇಡೀ ಆಯುಷ್ಯದ್ದು, ಉರಿಬಿಸಿಲು ಆಗೋಹೊತ್ತು ಬಂದದ —ದಾದಾ, ತಿಳಿದು ಅದ ನಿನಗೆಲ್ಲಾ ಆ ಮಾತು.

**ಶ್ರೀಕಾಂತ:**—ಓಹೋ! ತಿಳಿದಿದ್ದಲ್ಲ, ಮತ್ತ ಅದು ಸರೀನs ಅದ; ವೈವಾಹಿಕ ಜೀವನದ ನಿಯಮುಗಳು ಕೂಡ ಸೃಷ್ಟಿಯ ನಿಯಮು ಗಳಿದ್ಧಾಂಗs! ಲಗ್ನದ ತರುವಾಯದ ಪ್ರೀತಿವಸಂತದ ಬೆನ್ನಹಿಂದೆ ಅತಿಸಹವಾಸದ ಗ್ರೀಷ್ಮದ ಉರಿ····

**ಬೇಬಿ:**— (ಅವನ ಮಾತಿನ ಧಾಟಿಯನ್ನೇ ಅನುಕರಿಸಿ) ಆದರ ಸೃಷ್ಟಿಯ ಉರಿ ಶಾಂತಮಾಡಲಿಕ್ಕೆ ವರ್ಷಾಕಾಲದ ಜಲಧಾರೆಗಳೂ ಹರೀ ತಿರ್‍ತಾವ ಅಲ್ಲೆ! ಈ ಸವತೀಯಂಥ ಹನ್ನೆರಡು ತಿಂಗಳೂ ಉರಿಯೋ ಝಳಾ ಇರೋದಿಲ್ಲ!

**ಇಂದಿರಾ:**— (ತುಸು ವ್ಯಗ್ರಳಾಗಿ, ಮಾತಿನ ಓಟ ಬದಲಿಸುವುದಕ್ಕಾಗಿ) ಸಾಕು ಮಾಡು, ಬೇಬೀ. ಅಣ್ಣಾಗ ಚಹ-ಗಿಹ ತೊಗೊಳ್ಳಿಕ್ಕ ಬಿಡ್ತೀಯೋ ಇಲ್ಲೊ? ನಡಿ, ಶ್ರೀಕಾಂತ ಒಳಗ.

(ಹೊರಡಲನುವಾಗುವರು)

**ಶ್ರೀಕಾಂತ:**—ನಡಿ, ಕಕ್ಕಿ. ನಿನ್ನ ಬೆನ್ನಹಿಂದ ನಾವು ಬಂದೇಬಿಟ್ಟೆವಿ.

**ಇಂದಿರಾ:**— (ತಿರುಗಿ ಶ್ರೀಕಾಂತ ಮತ್ತು ಬೇಬಿಯನ್ನು ನೋಡುತ್ತ) ಲಗೂ ಬರ್‍ರಿ, ಇಲ್ಲದಿದ್ದರ ಕೂತೀರಿ ಮತ್ತ ವಾದ ಹಾಕತ.

(ಹೋಗುತ್ತಾಳೆ)

**ಬೇಬಿ:**— ಯಾವಾಗ ಮುಟ್ಟಿತೊ, ದಾದಾ, ನಿನಗ ಅಪ್ಪನ ಪತ್ರ? ಎಷ್ಟು ನಿನ್ನ ದಾರೀ ಕಾಯುತ ಇದ್ದಿವಿ ನಾವು!

**ಶ್ರೀಕಾಂತ:**—'ನಾವು' ಅಂದರ ನೀನೂ? ಯಾಕ ಬ್ರಿಜ್ಜಿಗೆ ಒಂದು ಉದ್ರಿ ಕಡಿಮಿತ್ತೇನು?

**ಬೇಬಿ:**— ಅಂತ ನಿನ್ನ ದಾರೀ ನೋಡ್‍ತಿದ್ದೆನೇನು?

**ಶ್ರೀಕಾಂತ:**—ಇದು ನೋಡು, ಬೇಬೀ. ಹೀಂಗ ಎರಡನೇದವರಮ್ಯಾಲ ಅವಲಂಬಿಸಿ ಕೂಡೋದರಾಗ ಅರ್ಥಿಲ್ಲ. ನೀನು ಈಗ ದೊಡ್ಡಾಕಿ ಆದಿ. ಕಾಯದೇದೊಳಗೂ ಬಂದಿ. ನಿನ್ನ ಮಾಲಕಿಯ ಒಬ್ಬ ಕಾಯುವ ಉದ್ದರಿನ್ನ ನೋಡಿಡಲ್ಲs!

**ಬೇಬಿ:**— ಹೌದಪಾ. ಅಂವ ನನ್ನ ಮಾಲಕೀಯೊಳಗ ಕಾಯಮಾಗಿ ಇರ್‍ತಾನಂಬೋದಕ್ಕ ಹೊಣೆಯಾರು? ಮತ್ತ ಹಾಂಗ ಕಾಯದೆ

ಎಲ್ಲ್ಯದ? ಪಾದಾ, ಹೆಣ್ಣು ಹುಡುಗಿಯರು ಜಾಣರಾಗಿದ್ದರ ನಿಮ್ಮ ಪುರುಷಜಾತಿನ್ನ ಎಂದೂ ನಂಬಬಾರದು, ಇದು ಖರೆ!

ಶ್ರೀಕಾಂತ:—ಭಲೆ ಹುಡುಗಿ, ಹೌದು! ಬೇಬಿ, ನಿನಗ ಇತ್ತೀಚೆಗೆ ಬಹಳಷ್ಟು ತಿಳೀಲಿಕ್ಕೆ ಹತ್ತಿಧಾಂಗ ಕಾಣಸ್ತದಾಂ! ಆದರ, ನಿನಗೊಂದು ಕೇಳ್ತಿನಿ, ನಮ್ಮ ಜಾತಿ ನಂಬಿಗೀಗೆ ಪಾತ್ರಿಲ್ಲ ಅಂಬೋದು, ಆ ಜಾತಿಯ ಪೂರ್ಣಪರಿಚಯ ಆಗೋದಕ್ಕಿಂತ ಮೊದಲು ನಿನಗ ಹ್ಯಾಂಗ ತಿಳೀತು, ಬೇಬೀ? ಏನು ಇಷ್ಟರಾಗು ಯಾರಿಗೂ ಗೊತ್ತಾಗದಂತೆ, ಒಳಗಿಂದೊಳಗು ಮದಿವೀ ಮುಗಿಸಿಕೊಂಡು ಬಿಟ್ಟೀಯೊ?

ಬೇಬಿ:— ನಾನು? ನಾ ಯಾಕ ಒಳಗಿಂದೊಳಗು ಮದಿವೀ ಮುಗಿಸಿ ಕೊಳ್ಳಲಿ? ಚೆಲೋ ತಾಶೆ-ಬಜಂತ್ರಿ ಹಚ್ಚಿ ಮದಿವೀಮಾಡಿ ಕೋತೀನಿ; ಯಾರಿಗೂ ತಿಳೀಧಾಂಗ, ಗುಪ್ತವಾಗಿ ಮದಿವೀ ಮಾಡಿಕೊಂಬೋ ಹಕ್ಕು ನಿಮ್ಮ ವಿಶಿಷ್ಟವರ್ಗದ್ದು ಅದ, ರಾಯಾ! ಮೊದಲನೆ ಹೆಂಡತಿನ್ನ ಬಿಟ್ಟು, ಮನುಷ್ಯತ್ವ ಮರತು, ಯಾವಾಗ ಪ್ರೀತಿವಿವಾಹ ಮಾಡೋದಿರ್ತದಲ್ಲ ಆಗ, ಅದು ಕದ್ದು ಮುಚ್ಚಿ, ಗುಪ್ತವಾಗಿ ಮಾಡೋದಿರ್ತದ, ತಿಳೀತು?

ಶ್ರೀಕಾಂತ:—ಎಲಾ ಇವನ! ಬಹಳ ಗಡಚೆಂದು ಕಾಣಿಸ್ತದ ಈ ಎರಡನೇ ಮದಿವೀ ತಂತ್ರ! ಕಲೀಲಿಕ್ಕೆ ತುಸು ಕಷ್ಟದ್ದು ಅದ ಹಂಗಾರ.

ಬೇಬಿ:— ಆದರ, ನಿನಗ ಅಪೇಕ್ಷಾ ಇದ್ದರ ನಾ ಎಲ್ಲಾ ಕಲಸ್ತೀನಿ ಬೇಕಾದರ. ಮೊದಲನೆ ಹೆಂಡತಿ ಇರಲಿಕ್ಕೆ ಇನ್ನೊಬ್ಬಾಕೀ ಮ್ಯಾಲ ಪ್ರೇಮ ಹ್ಯಾಂಗ ಮಾಡಬೇಕು, ಬಹಳ ದಿವಸ ಅದರ ಪತ್ತೆ ಹತ್ತಗೊಡಧಾಂಗ ಹ್ಯಾಂಗ ಇರಬೇಕು, ಕೊನೀಗೆ..

ಶ್ರೀಕಾಂತ:—ಬೇಬೀ, ನೀ ಬಹಳ ಅದೃಷ್ಟವಂತಿ ಇದ್ದೀ ನೋಡು. ಅಲ್ಲು, ಜನರಿಗೆ ಈ ಜ್ಞಾನ ದೊರೀಬೇಕಾದರ ಏನು ಬೆಲೀ ತೆರ ಬೇಕಾಗ್ತದು! ಅಂಥಾದು ನೀನು ಕಾಲೇಜದಾಗ, ಬಿ.ಎ., ದ

ಲೆಕ್ಚರ್ ಕೇಳಿ-ಕೇಳ್ತಾ ಸಹಜವಾಗಿ ದೊರಕಿಸಿದ್ದೀಯಲ್ಲಾ ಇದನ್ನ?

ಬೇಬಿ:— ಕಾಲೇಜದೊಳಗಲ್ಲ, ಮಹಾರಾಯಾ; ಮನೀಯೊಳಗಾ! ಆ ನಿನ್ನ ಪ್ರೀತಿಯ ಬೀಗ ನಮಗ ಸಪ್ರಯೋಗವಾಗಿ ಈ ಜ್ಞಾನ ಮಾಡಿಕೊಟ್ಟಾನಸಾ!

ಶ್ರೀಕಾಂತ:—ಎಲ! ಹೌದಲ್ಲ! ಖರೆ! ವಸಂತ ಎರಡನೇ ಮದಿವೀಮಾಡಿ ಕೋತಾನಲ್ಲಾ? ಅದು ಖರೆ ಇರಲಿ, ಇರದಿರಲಿ, ನಿಮ್ಮ ತಿಳಿವಳಿಕಂತೂ ಹಾಂಗ ಆಗೇದ. ಯಾವದೋ ಹುಡುಗಿಯ ಜತಿಗೆ ಅವನ ಸ್ನೇಹ ತುಸುಮಟ್ಟಿಗೆ ಕೂಡಿದ್ದೀತು—ಕೂಡಿರ ಲಿಕ್ಕಿಲ್ಲ: ಒಂದು ವ್ಯಾಳ್ಯಾ ಬೌದ್ಧಿಕ ಇಲ್ಲವೇ ಕಲಾತ್ಮಕ ಸಾಹಚರ್ಯವೂ ಇದ್ದಿದ್ದೀತು! ಆದರ ನೀವು ಹೆಂಗಸರು··

ಬೇಬಿ:— ಬೌದ್ಧಿಕವೂ ಅಲ್ಲ, ಕಲಾತ್ಮಕವೂ ಅಲ್ಲ; ಕೆಟ್ಟ ಪ್ರಣಯಾತ್ಮಕ ಸಾಹಚರ್ಯ ಅದ! ಮತ್ತ ಇಷ್ಟರಲ್ಲೆ ಅವರ ಲಗ್ನ ಆಗೋದದ ಅಂಬೋದು, ಬರೆ ನಮ್ಮ ತಿಳಿವಳಿಕಷ್ಟಾ ಅಲ್ಲ; ಅದಕ್ಕ ಆಧಾರ ಗಳೂ ಸಿಕ್ಕಾವ. ನಿಮ್ಮ ಡಾ. ವಸಂತರಾಯರು ಮತ್ತಾ ಆ ಉಷಾನೋ— ನಿಶಾನೋ— ಆಕಿ, ಇಬ್ಬರೂ ಹದಿನೈದು- ಇಪ್ಪತ್ತು ದಿವಸದೊಳಗಾ ಮದಿವೀಮಾಡಿಕೊಳ್ಳೋದು ತೀರ ಸಂಭವನೀಯ ಅದ. ಯಾಕಂದರ, ಇಷ್ಟರಲ್ಲೆ ಈ ದ್ವಿಭಾರ್ಯಾ ಪ್ರತಿಬಂಧಕ ಕಾನೂನು ಬ್ಯಾರೆ ಜಾರಿಯಲ್ಲಿ ಬರತಕ್ಕದ್ದದ. ಸದ್ಯಕ್ಕಂತೂ ನೋಡು, ಇಡೀ ಊರಾಗ ಇದೊಂದೇ ಮಾತಿನ ಚರ್ಚಾ!

ಶ್ರೀಕಾಂತ:—ಹೀಂಗಾ? ಏನು ಭಾಗ್ಯವಂತ ಇದ್ದಾನ ಆ ಮಗ ವಸಂತ! ಅವನ ಮದಿವೀ ಬಗ್ಗೆ ಇಡೀ ಊರು ಮಾತಾಡ್ತಾದಲ್ಲ?

ಬೇಬಿ:— ಹುಂ, ಮತ್ತ ಅವನ ಈ ಭಾಗ್ಯಾ ನೋಡಿ, ನಿನಗೂ ಮತ್ಸರ ಅನಿಸ್ತಾದಲ್ಲ? ದಾದಾ, ಪರರ ಮನಸ್ಸಿನ ದರಕಾರಮಾಡದೆ, ನಿಮ್ಮದೇ ಸುಖ ನೋಡಿಕೊಳ್ಳೊ ಈ ನಿಮ್ಮ ಪುರುಷವೃತ್ತೀ ನೋಡಿದರ, ನನಗ ಹೊಟ್ಟ್ಯಾಗಿನ ಸಿಟ್ಟು ರಟ್ಟೆಗೇರ್ತದ!

**ಶ್ರೀಕಾಂತ:**—(ಬೇಬಿಯ ಹತ್ತಿರ ಹೋಗಿ, ಮೊದಲಿನಂತೆಯೇ ಶಾಂತವೃತ್ತಿಯಲ್ಲಿ) ಹೌದು, ಬೇಬಿ; ಆದರ ಆ ವಸಂತನ್ನ ಮುದಿಪೀ ಆಗೋವಾಕಿ ನಿಮ್ಮ ಜಾತಿಯು ಒಬ್ಬ ಸ್ತ್ರೀನs ಇದ್ದಾಳಲ್ಲ?

ಬೇಬಿ:— (ಕಾಲಪ್ಪಳಿಸುತ್ತ) ಅದs ದುರ್ದೈವದ ಮಾತದ! ಎಂಥಾ ಸುಖದಲ್ಲಿ ನಡದಿತ್ತು ನಮ್ಮ ಅಕ್ಕನ ಸಂಸಾರ. ಈ ಉಷಾ ಉದಯಾಗೋ ಮೊದಲು. ಇಬ್ಬರೂ ಸುಖದ ತೆಪ್ಪದೊಳಗ ತೇಲಾಡ್ತಿದ್ದರು.

**ಶ್ರೀಕಾಂತ:**—ಹೌದಲ್ಲ, ನಿಯಮನs ಅದs ಅದು. ಎಲ್ಲ್ಯಾದರೂ ಒಬ್ಬರ ಸುಖಕ್ಕ ಗೋಪುರ ಏರ್ತಿದ್ದರ, ಸ್ತ್ರೀ ಜಾತೀನ್ನ ಒಯಿದು ಅಲ್ಲಿ ನಿಲ್ಲಿಸಬೇಕು. ನೆಲಸಮ ಆಗಲಿಕ್ಕೆ ವ್ಯಾಖ್ಯಾನs ಹಿಡಿಯೋ ದಿಲ್ಲ! ತಪಸ್ಸು ಭಂಗಮಾಡಲಿಕ್ಕೆ ದೇವೇಂದ್ರ ಕೂಡ ಸ್ತ್ರೀ ಜಾತಿಯನ್ನs ಅಂದರ ಅಪ್ಸರೆಯನ್ನs—ಕಳಸ್ತಿದ್ದ ಅನ್ನೋದು ಗೊತ್ತಿಲ್ಲೇನು ನಿನಗ?

ಬೇಬಿ:— ಆದರ ತಪಸ್ಸು ಮಾಡುವವರು ಗಂಡಸರಿದ್ದರು ಅಂತ! ಹೆಂಗಸರು ತಪಸ್ಸು ಮಾಡುತ್ತಿದ್ದರ ಗಂಡಸರ್ನ ಕಳಸ್ತಿದ್ದ!

**ಶ್ರೀಕಾಂತ:**—ಆದರ ಹೆಂಗಸರು ತಪಸ್ಸು ಮಾಡ್ತಾರೆಲ್ಲೆ ಮಣ್ಣಾಗ? ಅವರು ಬರೆ ತಪಸ್ಸು ಭಂಗಮಾಡುವವರಷ್ಟs!

ಬೇಬಿ:— ಅದ್ಯಾಕ, ಹೆಂಗಸರs ತಪಸ್ಸು ಮಾಡೇ ಇಲ್ಲೇನು? ಪಾರ್ವತಿ ........

**ಶ್ರೀಕಾಂತ:**—ಉದಾಹರಣೆ ಸರಿ. ಹೆಂಗಸರು ತಪಸ್ಸೇನೋ ಮಾಡ್ತಾರ; ಅದು ಒಂದು ಕಾರಣಕ್ಕಾಗಿ—ಗಂಡನಿಗಾಗಿ. ಇಂದ್ರಪದದಂಥ ಪಾಮೂಲಿ ಮಾತಿಗಾಗಿ ಎಂದೂ ಇಲ್ಲ! ಮತ್ತ ಅವರು, ಒಮ್ಮೆ ತಪಸ್ಸಿಗೆ ಪ್ರಾರಂಭಿಸಿದರೊ, ಇಂದ್ರನ ಪ್ರತಿನಿಧಿಯಾಗಿ ಪ್ರತ್ಯಕ್ಷ ಇಂದ್ರನೇ ಬಂದರೂ ಆ ತಪಸ್ಸು ಭಂಗಾಗಲಾರದು. ಸದ್ಯಕ್ಕ ಇದs ನೋಡಲ, ಉಷಾ ಎಂಬ ಹೆಸರಿನ ಒಬ್ಬ ಹುಡುಗಿ ವಸಂತನಿಗಾಗಿ ತಪಸ್ಸು ಮಾಡಲಿಕ್ಕೆ ಸುರುಮಾಡ್ಯಾಳ. ಮತ್ತ ಅದನ್ನ ನೀವ್ಯಾರೂ ಭಂಗಮಾಡೋದು ಸಾಧ್ಯ ಇಲ್ಲ.

ಬೇಬಿ:— (ಸಿಟ್ಟಿನಿಂದ) ಮಾಡವರ್‍ಯಾರು? ಯಾರ ಹೊಟ್ಟಿ ನೋಯಿಸ್ತದ. ಅವರು ಅಜವಾನಾ ತಿನ್ನಬೇಕು, ಪ್ರತ್ಯಕ್ಷ ತನ್ನ ಸಂಸಾರ-ಸುಖದ ಹೋಳಿ ನಡಿದಿದ್ದರೂ, ಅಕ್ಕಗs ಏನೂ ಮಾಡಬೇಕು ಅಂತ ಅನಿಸದಿದ್ದರ....

ಶ್ರೀಕಾಂತ:—ಆಕೀ ಸುಖದ ಚಿಂತಿ ಯಾರಿಗದ ಅವರು ಮಾಡಬೇಕು.

ಬೇಬಿ:— ಈ ಮಾತು ನೀನs ಆಡ್ತೀ ಅಂತ ನೆಟ್ಟಗ. ಮಗಳ ಸುಖದ ಚಿಂತಿ ಹಡೆದ ತಾಯಿಗೆ ಹೌದಲ್ಲೊ? ಇಲ್ಲಂತೂ ಅಕ್ಕನ ತರುವಾಯ ಯಾರಾದರೂ ಧಣ್ಣಾಗ ಕೂತವರಿದ್ದರ ಆಮೊಬ್ಬ ಅವ್ವ!

ಶ್ರೀಕಾಂತ:—ಹೌದು ಆಕಿ ನಿನ್ಹಾಂಗ ಭಾಷಣಾ ಮಾಡೋದಿಲ್ಲಲ್ಲ?

ಬೇಬಿ:— ಒಳ್ಳೇದು, ಬ್ಯಾರೆ ಆದರೂ ಏನು ಮಾಡ್ತಾಳವಾ?

ಶ್ರೀಕಾಂತ:—ಅದು ನಿನಗ ಹ್ಯಾಂಗ ಗೊತ್ತಾದೀತು ಬೇಬೀ. ನಿನ್ನ ತಾಯಿನ್ನ ನೀ ಇನ್ನೂ ತಿಳಕೊಂಡಿಲ್ಲ.

ಬೇಬಿ:— ನನಗಂತೂ ಆಕಿ ಏನೂ ಪ್ರಯತ್ನಮಾಡೋದs ಕಾಣವಲ್ಲದು, ಬರೆ ಮನಸ್ಸಿಗೆ ಹಚ್ಚಿಗೊಂಡು ಕೊರಗತಾಳ ಆತ್ಯು, ಆದರ ಇದರಿಂದ ಸಿಗೋ ಫಲ ಏನು? ನನ್ನ ಕೇಳಿದರ, ನಾವು ಎಲ್ಲರೂ ಕೂಡಿ ಆ ವಸಂತರಾಯನ ಸುತ್ತ ದೊಡ್ಡ ಹುಯಿಲು ಎಬ್ಬಿಸಬೇಕು.

ಶ್ರೀಕಾಂತ:—ಸರಿ. ಆದರ ಎಷ್ಟೋ ಸಲ, ಈ ಹುಯಿಲೆಬ್ಬಿಸೋ ಸನ್ನಿ ವೈಯಾಗ ಸೇರಿತು ಅಂದರ, ನಾವು ಯಾತಕ್ಕಾಗಿ ಇದನ್ನ ಮಾಡ್ತೇವಿ ಅಂಬೋದನ್ನ ಮರೆತು, ನಾವs ಈ ಹುಯಿಲೊಳಗ ಹಾದೀ ತಪ್ಪಿ, ಅಡವೀ ಪಾಲಾಗೋ ಸಂಭವ ಬಹಳಿರ್ತದ!

ಬೇಬಿ:— (ಚಿರಡಿಗೆದ್ದು) ಆತ್ಯು, ಸುರು ಆತ್ಯು ನಿನ್ನ ವಿಚಕ್ಷಣತೆಗೆ! ಮೊದಲs ನಾ ಅವ್ವಗ ಅಂದಿದ್ದೆ, ದಾದಾ ಬಂದ ಅಂದರ ಪ್ರತಿಯೊಬ್ಬರ ಕೃತಿಯ ಉದ್ದೇಶ, ಅದಕ್ಕ ಅರ್ಥ, ಅದರ ಶಕ್ಯಾಶಕ್ಯತೆ, ಯುಕ್ತಾಯುಕ್ತತೆ ಇದರ ಗುಂಜುಬಿಡಿಸೋ ಕೆಲಸಾ ಅಷ್ಟು ಮಾಡ್ತಾನ ಅಂತ. ಈ ನಿನ್ನ ಮಥಿತಾರ್ಥದ್ದು

ನನಗ ಅರ್ಥಾಗೋದಿಲ್ಲ. ಸೀದಾ ಕಾರ್ಯಾ ಮಾಡೋದು ನನಗ ತಿಳೀತದ.

ಶ್ರೀಕಾಂತ:—ಅದs ಮಹತ್ತ್ವಸ್ದದ ಮತ್ತ. ನಾ ಕೇಳ್ತಿನಿ, ಕಕ್ಕೀದು ಬಿಡು, ನೀನು ಇದರ ಬಗ್ಗೆ ಏನೇನು ಮಾಡೀ ನನಗ ಹೇಳು.

ಬೇಬಿ:— ದ್ವಿಭಾರ್ಯಾ ಕಾನೂನಿಗೆ ಬೆಂಬಲ ಕೊಡೋದಕ್ಕಾಗಿ ಇವತ್ತು ಪ್ರಚಂಡ ಸಭಾ ಕೂಡಿತ್ತಲ್ಲ, ಆ ಸಭೆಯಲ್ಲಿ ಎಲ್ಲಕ್ಕೂ ಮಹತ್ತ್ವದ ಭಾಷಣ ನಾ ಮಾಡಿದೆ.

ಶ್ರೀಕಾಂತ:—(ಗೇಲಿಮಾಡುವ ದನಿಯಲ್ಲಿ ನಕ್ಕು) ಓಹೊ, ಅದು ಹೌದಲ್ಲೊ, ಬಂದಕೂಡಲೆ ಅದರ ನ್ಯಾಂವಲ್ ನನ್ನೆದುರಿಗೆ ತುಸು ಅಂದು ತೋರಿಸಿದಿ! ಒಳ್ಳೇದು, ಮುಂದ....

ಬೇಬಿ:— (ಬಿಕ್ಕೊಂಡವಳಾಗಿ) ದಾದಾ ಗೀದಾ!

ಶ್ರೀಕಾಂತ:—ಅಲ್ಲs, ಹಾಂಗಲ್ಲ. ಸಿಟ್ಟಾಗಬ್ಯಾಡ, ಇದು ನೋಡು. ನಿನ್ನ ನಿಶ್ವಾಸ ಸಾಂಘಿಕ ಪ್ರಯತ್ನದ ಮ್ಯಾಲ ಅದ, ಕಕ್ಕಿಯ ವಿಶ್ವಾಸ ವೈಯಕ್ತಿಕ ಪ್ರಯತ್ನದ ಮ್ಯಾಲ ಇದ್ದೀತು....

ಬೇಬಿ:— ಹುಂ. ಮತ್ತ ನಿನ್ನ ವಿಶ್ವಾಸ....ಬರೆ ಭಾಷಿಕಪ್ರಯತ್ನದ ಮ್ಯಾಲ ಕಾಣಿಸ್ತದ.

ಶ್ರೀಕಾಂತ:—ಯಾವಾಗಲೂ ಮತ್ತೇನs ಬೇಬೀ, ಕಾಕಾ ಅವರ ವಿಶ್ವಾಸ ಯಾತರ ಮ್ಯಾಲದ? ಅದನ್ನ ತುಸು ಹೇಳಲ?

(ಇಂದಿರಾಬಾಯಿಯವರು ಬರುತ್ತಾರೆ.)

ಇಂದಿರಾ:— ಏನ್ರ್ಯೊ, ಚಹಾಕ್ಕ ಬರ್ತಿರಲ್ಲ?

ಶ್ರೀಕಾಂತ:—ಬಂದಿವಿ ಕಕ್ಕಿ. ಹಂ, ಬೇಬಿ, ಕಾಕಾ ಅವರ ವಿಶ್ವಾಸ.... ಹೇಳಲಿಲ್ಲ?

ಬೇಬಿ:— ಅಪ್ಪನ ವಿಶ್ವಾಸ? ನನಗ ಸೇರ್ತಾವ ಅವರ ರೀತಿ. ಅವರ ವಿಶ್ವಾಸ ಥೆಲೊ ಕಾಷ್ಟಿಕ ಪ್ರಯತ್ನದ ಮ್ಯಾಲ ಕೂತದ. ವಸಂತರಾಯರು ಮದಿವೀಮಾಡಿಕೊಳ್ಳೋ ಸುದ್ದೀ ಕೇಳಿದ ದಿವಸಂತೂ, ಅಪ್ಪ ಹೀಂಗ ತಪ್ತರಾದರು, ಆಗ ವಸಂತ ರಾಯರು ಎದುರಿಗೆ ಸಿಗಬೇಕಾಗಿತ್ತು; ಅಂದರ ಅಪ್ಪನ

ಸೋಟಾಕ್ಕs ತುತ್ತಾಗ್ತಿದ್ದರು. ಮತ್ತ ಇವರಿಗೆ ಹಿಂಗs ಬೇಕು. ಬರೆ ತಿಳಿವಳಿಕಿ ಹೇಳಿ ಅವರ್ನ ಹಾದಿಗೆ ತಂದೇವು ಅನ್ನೋ ಮಾತs ಸುಳ್ಳು. ಈಗ ತಾವು ಏನು ಮಾಡ್ತೇವಿ ಅಂಬೋದರ ಎಚ್ಚರ ಕೂಡ ಇಲ್ಲ ಅವರಿಗೆ.

(ಇಷ್ಟರಲ್ಲಿ ಅಪ್ಪಾರಾಯರು ಕಚೇರಿಯ ವೇಷದಲ್ಲಿ 'ಯಾರಿಗೆ ಎಚ್ಚರ ಉಳಿದಿಲ್ಲ?' ಎನ್ನುತ್ತ ಒಳಗೆ ಬರುತ್ತಾರೆ. ಅಪ್ಪಾರಾಯರು ಬುದ್ಧಿಶಾಲಿಗಳೂ, ಕರ್ತೃತ್ವಶಾಲಿಗಳೂ ಆಗಿದ್ದು, ವಿರೋಧವನ್ನು ಸಹಿಸುವ ರೂಢಿ ಇಲ್ಲದ ಸರಕಾರೀ ಅಧಿಕಾರಿಗಳಾಗಿದ್ದಾರೆ.)

ಶ್ರೀಕಾಂತ:—ನಮಸ್ಕಾರ ಮಾಡ್ತೇನಿ, ಕಾಕಾ.

ಅಪ್ಪಾ:— ಯಾರು, ಶ್ರೀಕಾಂತ? ಯಾವಾಗ ಬಂದಿ? ಹಂ, ನಿನ್ನ ಕಕ್ಕಿಯ ಕಾಗದ ಮುಟ್ಟಿಧಾಂಗ ಕಾಣಿಸ್ತದ. ನಮ್ಮ ಪುರಾಣದೊಳಗ—ಪುರಾಣದೊಳಗs ಯಾಕ—ಈ ಕಾಲದೊಳಗೂ ತಂಗಿಯಾದಾಕಿ ಅಣ್ಣಾಗ ಮೊರೆಯಿಟ್ಟ ಉದಾಹರಣೆಗಳು ಅನೇಕವ. ಆದರ ಕಕ್ಕಿಯಾದಾಕಿ ಸಂಕಟದೊಳಗಿದ್ದಾಗ ತನ್ನ ಮೈದುನನ ಮಗನಿಗೆ ಮೊರೆಯಿಟ್ಟದ್ದು ಇದು ಮೊದಲನೇ ಉದಾಹರಣೆನೇ ಇರಬೇಕು.

ಶ್ರೀಕಾಂತ:—ಛೆ, ಛೆ, ಮೊರೆಯಿಡೋದೇನು ಬಂತು! ಏನೇನು ನಡದsದ ಅನ್ನೋದನ್ನಷ್ಟs ಕಕ್ಕಿ ಬರೆದಿದ್ದಳು. ಮತ್ತ ಇಂಥ ತೊಡಕಿನ ಪರಿಸ್ಥಿತಿಯೊಳಗ ಇದರಹೊರ್ತು ಬ್ಯಾರೇ ಏನು ಮಾಡೋ ಹಾಂಗಿತ್ತು ಕಕ್ಕಿ?

ಬೇಬಿ:— ತೊಡಕಿನ ಪರಿಸ್ಥಿತಿ ಏನುಬಂತು? ಬ್ಯಾರೆಯವರು ಮೂರ್ಖತನ ಮಾಡಿದರ ಅವ್ವನ ಪರಿಸ್ಥಿತಿ ತೊಡಕಿನದಾಗೋ ಕಾರಣೇನು?

ಅಪ್ಪಾ:— ಬೇಬಿ, ನಿನ್ನ ತಾಯಿಯ ಬಗ್ಗೆ ನೀಯೇನೂ ಹೇಳಬ್ಯಾಡ. ಆಕಿಯ ಮನಸ್ಸಿನ ಅಂತ ಹತ್ತೋದು ನಿನಗ ಶಕ್ಯs ಇಲ್ಲ. ಇಪ್ಪತ್ತೇಳು ವರ್ಷಾದವು ನಮ್ಮ ಲಗ್ನಕ್ಕ. ಆಕಿಯ ಮನಸ್ಸಿನ ಅಂತ ಹತ್ತೇದ ಅಂತ ನನಗs ಇನ್ನೂ ಅನಿಸವಲ್ಲದು.

ಶ್ರೀಕಾಂತ:—ನಿಜವಾಗಿ ಕಕ್ಕಿಯ ಮನಸ್ಥಿತಿ ಬಹಳ ಗೊಂದಲಗೆಟ್ಟಿರಬೇಕು.

ಶ್ರೀಕಾಂತ:—ಹೌದವಾ ಕಕ್ಕಿ, ನೀ ಅನ್ನೋ ಮಾತು ಖರೆ, ಆದರ....
ಇಂದಿರಾ:— ಅದನ್ನೇ ಹೇಳ್ತಿನಲ್ಲೊ; ಈ ವಸಂತರಾಯನ ಪ್ರಕರಣ ಸುರುವಾದಾಗಿನಿಂದ, ನನ್ನ ಜೀವ ಹಗೇದೊಳಗ ಒಗೆಧಾಂಗ ಆಗೇದ. ಅದರ ಕಲ್ಪನಾ, ನಿನ್ನ ಹೊರ್ತು ಬೇರೆಯವರಿಗೆ ಬರಲಾರದು. ಇವರ ಹಾದಿ ಒಂದು, ಬೇಬಿಯದು ಇನ್ನೊಂದು. ಅಕ್ಕು ಅಂತೂ ಈ ವಿಷಯದಲ್ಲಿ ಮಾತೇ ಆಡುವಹಾಂಗಿಲ್ಲ ಅಂತ ನಿರ್ಣಯಿಸಿಕೊಂಡ್ಹಾಂಗ ಕಾಣಿಸ್ತದ. ನಾನಾದರೂ ಮಾಡಲೇನು? ಅಂತೇ ಪತ್ರ ಕಳಿಸಿದೆ ನಿನಗ. ಅನಿಸಿತು, ಈ ಪ್ರಸಂಗದೊಳಗ ವಸಂತರಾಯನ ಕೂಡ ನೀನೇನಾದರೂ ಮಾತಾಡಬಹುದು ಅಂತ.
ಶ್ರೀಕಾಂತ:—ನೀ ಅಂದುಕೊಂಡದ್ದು ಸರಿ ಕಕ್ಕಿ. ಆದರ ವಸಂತರಾಯನಂಥ ಸ್ವಭಾವದ ಮನುಷ್ಯನ್ನ ಅವನ ನಿಶ್ಚಯದಿಂದ ಪರಾವೃತ್ತ ಗೊಳಿಸೋದು ಬಹಳ ಕಠಿಣದ! ಮೊದಲೇ ಅಂವ ಗಂಡುಸು, ಅದರಾಗ ಹಟದ ಸ್ವಭಾವ. ಇಂಥ ಮನುಷ್ಯ, ಪ್ರೇಮದ ಚಕ್ರದಾಗ ಸಿಕ್ಕಿಬಿದ್ದ ಅಂದರ, ಅದರೊಳಗಿಂದ ಹೊರಗ ತಗಿಯೋದು ಬಹಳ ದುಸ್ತರ!
ಇಂದಿರಾ:— ನಿನ್ನ ಮಾತು ಖರೆ ಅದ, ಶ್ರೀಕಾಂತ. ಬಹಳಾದರ ವಸಂತ ರಾಯನ, ಈ ಮದಿವಿ ಆಗಬಾರದು ಅಂತ ನಾವು ಸಾಯಾಸ ಪಡೋದು. ಏನss ಆದರೂ ಅಕ್ಕೂನ ಸಂಸಾರ ಅಂದರ, ಸದ್ಯಕ್ಕ ಒಂದು ಆಣಿ ಬಿಟ್ಟ ಕಾಯಿ ಆತ್ಯು. ಇನ್ನ ಮುಂದ ಲೌಕಿಕದೃಷ್ಟಿಗೆ ಅಂತ ಹ್ಯಾಂಗೋ ಸಂಸಾರ ಮಾಡೋದು, ಆತ್ಯು. (ತುಸು ವಿಚಾರಮಾಡಿ) ಖರೆ ಹೇಳಲಿ, ಶ್ರೀಕಾಂತ, ನನ್ನ ಮನಸ್ಸಿನಲ್ಲಂತೂ ಕ್ಷಣ ಕ್ಷಣಕ್ಕೂ ಆ ಹುಡುಗಿಯ ಬಗ್ಗೇ ವಿಚಾರ ಬರ್‍ತಾವ. ಅನಿಸ್ತದ, ಕಾಣಾಕಾಣಾ ಬೆಂಕಿಯಲ್ಲಿ ಹಾರಿಕೊಳ್ಳೋದಕ್ಕ ಆ ಹುಡುಗಿ ತಯಾರಾಗೇದಲ್ಲ ಅಂತ. ಸವತೀಮ್ಯಾಲ ಸಂಸಾರ ಅಂದರ, ಬಾಯೊಳಗ ಚೆಂಡು ತುರುಕಿ ಗುದ್ದಿಕಿ ಕೊಟ್ಹಾಂಗ ಅಂಬೋದು ಅವಳ ಕಲ್ಪನೆಯಲ್ಲೂ

ಅಪ್ಪಾ:— ಬೇಷ್! ಬೇಷ್! ಘೋಷಣೇ ಅವಶ್ಯಮಾಡು. ಅದಕ್ಕ ಮೊದಲು, ಒಳಗ ಹೋಗಿ ಚಹಮಾಡು ಚ-ಹ!

(ಬೇಬಿ ವಟಗುಟ್ಟುತ್ತ ಒಳಗೆ ಹೋಗುವಳು—ಹೋಗುವಾಗ 'ಸಣ್ಣವರು ಅಂದರ ಇವರ ಲೆಕ್ಕದೊಳಗs ಇಲ್ಲ' ಎನ್ನುತ್ತ ಹೋಗುವಳು.)

ಅಪ್ಪಾ:— (ಅವಳು ಹೋದದ್ದನ್ನು ನೋಡಿ) ಇದೇ ರೀತಿ ನಡದದ ಶ್ರೀಕಾಂತ ಮನಿಯೊಳಗ— ವಸಂತರಾಯನ ಈ ಪ್ರೇಮಪ್ರಕರಣ ಆರಂಭ ಆದಾಗಿನಿಂದ, ನಾ ಈಕೀಗೆ ಎಷ್ಟೋ ಸಲ ಆಡಿತೋರಿ ಸೀನಿ, ಒಮ್ಮೆ ನಮ್ಮ ಲಗ್ನದ ಇತಿಹಾಸ ಮಕ್ಕಳ ಕಿವೀಮ್ಯಾಲ ಹಾಕಿಬಿಡೋಣ ಅಂತ. ಆದರ ಈಕೀಗದು ಒಪ್ಪಿಗಿಲ್ಲ. ಆ ಕೆಲಸ ನೀನs ಮಾಡಬೇಕು ಅಂತ! ನಿನಗ ಈಗ ನಿಮ್ಮ ಮಿತ್ರವರ್ಯರು ತಮ್ಮ ಕಲ್ಯಾಣ ಗುಣ, ಬಯಲಿಗೆ ಹಾಕಿದ ಹಕೀಕತ್ತಂತೂ, ತಿಳಿದಿದ್ದs ಅದs.

ಶ್ರೀಕಾಂತ:—ಹುಂ.

ಅಪ್ಪಾ:— ಕಲಸ್ರಿ ಅವರಿಗೇನಾದರೂ ತುಸು ಬುದ್ಧೀ. ಎಂಥಾ ನುಸ್ಪ ಭಾವದ, ಆಜ್ಞಾಧಾರಕಳಾದ ಹುಡುಗಿ ಹೆಂಡತಿ ಅಂತ ದೊರೆತಾಳ. ಈ ಮಗನದೇನೊ ಬ್ಯಾರೆ ಹುಡುಗಿಯ ಮ್ಯಾಲ ಪ್ರೇಮ ಕೂತsದಂತ! ದೈವಗೇಡಿಲಕ್ಷಣ, ಮತ್ತೇನು? ಆದರ ಅವಗ ಹೇಳ್ರಿ, ಈ ಅಪ್ಪಾರಾಯರ ಜೋಡೀ ವ್ಯವ ಹಾರದs ಅಂತ! ನೋಡ್ತಿನಿ ಒಂದು ಕೈ ಹ್ಯಾಂಗ ಲಗ್ನಾ ಗ್ತದೊ?

ಶ್ರೀಕಾಂತ:—ಆದರ ಕಾಕಾ, ನೀವು ಕೂಡsss.... (ಸರಿಪಡಿಸಿಕೊಳ್ಳುತ್ತ) ಅಲ್ಲ.... ಅಂದರ.... ನೀವು ಈ ಮದಿವೀ ಮುರಿಯು ವವರು ಹ್ಯಾಂಗ?

ಅಪ್ಪಾ:— ಯಾಕ? ತಿಳೀತು. ಅಂದರ ನಾವು ಸ್ವತಃ ಎರಡನೇ ಮದಿವಿ ಮಾಡಿಕೊಂಡೀವಲ್ಲs? ನಮ್ಮ ಎರಡನೇ ಮದಿವಿ ಅಂದರ ಒಂದು ಅಪರಾಧನs ಆಯಿತs? ಹಂಗಾರ ನಾವು ಮಾಡಿದು

ಸೆಗಣೇ ತಿಂಬೋ ಕಾರಭಾರ ಅಂತಾತ್ಯೋ! ಅಲ್ಲೋ ಮೂರ್ಖಾ, ನಾವು ಎರಡನೇ ಮದಿವಿ ಮಾಡಿಕೊಂಡಿವಿ. ಆಗಿನ ಮಾತಃ ಬ್ಯಾರೆ ಇತ್ತು. ಒಬ್ಬಾಕಿನ್ನ ಮದಿವ್ಯಾಗಿ, ಅವಳ ಪ್ರೇಮದ ಬೇಜಾರು ಬಂದಮ್ಯಾಲ, ಎರಡನೆಯಾಕಿಯ ಮ್ಯಾಲ ಮನಸ್ಸು ಹೋಗಿ ಮೊದಲನೆಯಾಕಿ ಬ್ಯಾಡ ಅಂತ ನಮಗನಿಸಲಿಲ್ಲ! ಮೊದಲಿನಿಂದಲೇ ನಮಗದು ಒಪ್ಪಿಗಿರಲಿಲ್ಲ. ಎರಡನೇ ಮದಿವ್ಯಾಗಬೇಕು ಅಂತ ಅನಿಸಿತು. ನಾವು ನರಳ ಇವರ್ನ ನೋಡಲಿಕ್ಕೆ ಹೋದಿವಿ. ಯಾಕ್ರಿ? (ಇಂದಿರಾಬಾಯಿ ಉತ್ತರಕೊಡುವದಿಲ್ಲ.) ನಮ್ಮವೆಲ್ಲ ಕಗ್ಗಮಾರ್ಗ ಏನ್ರೀಪಾ! ಈ ಕಾಲದ ನಿಮ್ಮ ಈ ಪ್ರೇಮದ ಲಕ್ಷಣಗಳೂ ನಮಗ ತಿಳೀಲಿಲ್ಲ! ನಾವೆಂದೂ ಈ ಪ್ರೇಮದ ಭಾನಗಡಿಯೊಳಗೂ ಬೀಳಲಿಲ್ಲ! ಮತ್ತ ಅದರಿಂದ ನಮ್ಮ ಮ್ಯಾಲ ಯಾರದೂ ಶಹ ಬರಲಿಲ್ಲ. ವಸಂತರಾಯನ ಈ ಪ್ರೇಮ-ಪ್ರಕರಣ ಈ ಥರಕ್ಕ ಮುಟ್ಟೀತು ಅಂತ ನಮಗ ಪ್ರಾರಂಭಕ್ಕಃ ಅನಿಸಿದ್ದರ, ನಾವು ಹದಿನೆಂಟು ಖಟಪಿಟಮಾಡಿ, ಆ ಹುಡುಗಿನ್ನ ಈ ಊರು ಬಿಡಿಸೇ ಓಡಿಸಿಬಿಡ್ತಿದ್ದಿವಿ; ಮತ್ತ ಈ ಪ್ರೇಮದ ಬೇರಃ ಕಿತ್ತಿಹಾಕ್ತಿದ್ದಿವಿ! ನಮ್ಮ ಬೇಬೀ ಮಾತ್ರ ....ಬಲು ಹರೇಮಿ ಹುಡುಗಿ! ಇದನ್ನ ಎಂದೋ ಕಂಡುಹಿಡಿದಿದ್ದಳು ನೋಡು, ಶ್ರೀಕಾಂತ! ಆ ಹುಡುಗಿ ಕೆಲವು ದಿವಸದಿಂದ ಈ ಮಾತನ್ನ ನಮಗ ಹೇಳೇ ಹೇಳ್ತಿತ್ತು. ಆದರ ನಮಗ ಆ ದೃಷ್ಟೀನೇ ಇಲ್ಲ!

ಶ್ರೀಕಾಂತ:—ಮತ್ತ ಕಾಕಾ, ಈ ಪ್ರಕರಣ ಇಷ್ಟೊಂದು ಮುಂದವರಿದ ಮ್ಯಾಲ ಅದನ್ನ ಮುರಿಯೋದೂ ಸುಲಭಲ್ಲ. ಹಿಂಗ ಬೆದರಕೀ ತೋರಿಸಿ, ಎಲ್ಲೆರ ಮದಿವಿ ಮುರೀತಿರ್ತಾವೇನು?

ಅಪ್ಪಾ:— (ಕುಪಿತರಾಗಿ) ಮುರಿಯೋದಿಲ್ಲ, ಅಂದರೇನು? ಮುರೀಲಿಕ್ಕೇಬೇಕು. ಕನಿಷ್ಟ ಈ ಮದಿವ್ಯಾದರೂ ಮುರಿದೇ ತೀರಬೇಕು. ತನ್ನ ಪ್ರೇಮದ ಹವ್ಯಾಸ ಪೂರೈಸಿಕೊಳ್ಳೋದಕ್ಕಾಗಿ ತಾನು

ಯಾರ ಹಕ್ಕನ್ನು ಕಾಲ್ಕೆಳಗ ತುಳೀತೀನಿ ಅನ್ನೋದನ್ನ ಆ ವಸಂತ ವಿಚಾರ ಮಾಡಬೇಕಾಗಿತ್ತು. ಅದನ್ನ ಆ ಮಗ ಪೂರಾ ಮರಥಾಂಗs ಕಾಣಿಸ್ತದ. ಆದರs ಗಂಟು ಅದ ನನ್ನ ಕೂಡ ತಿಳೀತೇನು? ಹೇಳ್ರಿ ಅವಗ, ನಿನ್ನ ಹೆಂಡತಿ ಅಂದರ ದಿಕ್ಕಿಲ್ಲದ ಹೆಣ್ಣಲ್ಲ ಅಂತ! ನಾ ನಮ್ಮ ಅಕ್ಕೂನ್ನ ಒಬ್ಬ ಸಂಸ್ಥಾನಿಕಗೆ ಕೊಡ್ತಿದ್ದೆ, ಇಲ್ಲ, ಕಲೆಕ್ಟರಗೆ ಕೊಡ್ತಿದ್ದೆ. ಆದರ ಈ ಹುಡುಗ ಬುದ್ಧಿವಂತ, ಗುಣವಂತನೂ ಇದ್ದ; ಮೇಲಾಗಿ ನಿನ್ನ ಕೇವಲ ಗೆಳೆಯ, ಮ್ಯಾಲ ಇವರ ಒತ್ತಾಯ, ಅಂತ ಇಂವಗ ಹುಡುಗಿನ್ನ ಕೊಟ್ಟವಿ. ಯಾಕ್ರಿ? ಶಿಕ್ಷಣಕ್ಕ ಸಹಾಯ ಮಾಡಿದಿವಿ. ರಾಜರಮಗನ್ಹಾಂಗ ಆರಾಮಿಲೆ ಇದ್ದು, ಬೇಕಾದಷ್ಟು ಕಲಿ ಅಂದಿವಿ. ಹುಡುಗ ಹುಷಾರ ಹಂ ಮತ್ತ. ಎಲ್ಲಾ ಪರೀಕ್ಷಾದೊಳಗೂ ಪಹಿಲಾ ನಂಬರ್ ಪಾಸ್! ನಿಜವಾಗಿ ನಮಗಾಗ ಧನ್ಯ ಅನಿಸಿತು; ಅಕ್ಕು ಎಂಥ ಅದೃಷ್ಟ ಶಾಲಿ ಅಂತ ಆನಂದಬಟ್ಟವಿ. ಈಗ ಅದೇ ಆ ಕುಲದೀಪಕ, ತನ್ನ ಕಲ್ಯಾಣಗುಣ ಎಲ್ಲಾ ಹೊರಗೆಡವಲಿಕ್ಕೆ ಹತ್ಯಾನ!

**ಶ್ರೀಕಾಂತ:**—ಅಲ್ಲ, ನೀವು ಇಷ್ಟೊಂದು ಅವನಮ್ಯಾಲ ಉಪಕಾರ ಮಾಡಿದಿರಿ. ಅದರ ನೆನಪು ಕೊಟ್ಟು, ಅವನ ಮನವೊಲಿಸೋ ಪ್ರಯತ್ನ ಏನಾದರೂ ನೀವು ಮಾಡಿರಲೇಬೇಕಲ್ಲ?

**ಅಪ್ಪಾ:**— ಮನವೊಲಿಸೋ ಪ್ರಯತ್ನ? ಅವು ನಿಮ್ಮ ಕೆಲಸ ಶ್ರೀಕಾಂತ; ನಮ್ಮವಲ್ಲ. ಇಷ್ಟಾಗಿ ಆ ಹುಡುಗ ಮಹಾ ಪೆಂಗಿ ಇದ್ದಾನ. ನಮ್ಮ ಅಪಮಾನ ಮಾಡಿದರೂ ಮಾಡಬಹುದು.

**ಶ್ರೀಕಾಂತ:**—ಹಾಂಗಂದರ ಕಾಕಾ, ನೀವು ಈ ಸುದಿವಿ ಮುರಿಯುವವರ್ಹ್ಯಾಂಗ?

**ಅಪ್ಪಾ:**— ಯಾಕ? ನಾವು ಆ ಹುಡುಗಿನ್ನ ಕಾಣೋದು ಅಂತ ಮಾಡಿಕೊಂಡೀವಿ. ಅಂವ ಯಾರೋ ಇದ್ದಾನಂತಲ್ಲ—ಅವಳ ಪಾಲಕ—ಚೈತನ್ಯ ಅಂತ, ಅವನ ಮಾರ್ಫತು ಅವಳ್ನ ಭೆಟ್ಟಿಯಾಗ್ತೀವಿ.

ಶ್ರೀಕಾಂತ:—ಹೌದು, ಆಕೀಗೆ ನೀವು ಏನು ಹೇಳುವವರು? ಆಕಿ ಹೀಂಗ ಅನಬಹುದು, ಮೊದಲು ನಿಮ್ಮ ಅಳಿಯನ್ನ ಒಲಿಸಿಕೊಳ್ರಿ, ಆಮ್ಯಾಲ ನನಗ ಉಪದೇಶಮಾಡಲಿಕ್ಕೆ ಬರ್‍ರಿ—ಅಂತ.

ಅಪ್ಪಾ:— ಇದನ್ನ ನೀ ಅನಬಹುದು ಆಕಿ ಹೆಣ್ಣುಮಗಳಿದ್ದಾಳ. ಆರ್ಯ ಸ್ತ್ರೀ ಇದ್ದಾಳ. ಆಕೆಂದೂ ಹೀಂಗ ಅನಲಾರಳು. ಒಂದು ಸಮಯ ಹೀಂಗಂತಾಳ ಅಂತ ಇಟ್ಟುಗೊಳ್ಳೋಣ. ಆಗ ನಾವು ಸ್ಪಷ್ಟವಾಗಿ ಆಕೀಗೆ ಈ ಪ್ರಶ್ನೆ ಹಾಕಬಹುದು— ಮಹರ್ಷಿ ಕರ್ವೆಯಂಥವರು ನಿಮ್ಮ ಹೆಂಗಸರ ಸಲುವಾಗಿ ತಮ್ಮ ದೇಹ ಸವಿಸಿದರು, ಅದರದೇನು ಸಾರ್ಥಕಾತ್ಯೋ? ನಿನಗ ಎಂಥ ಗಂಡಬೇಕು, ನನಗೆ ಹೇಳು. ನಾ ಹುಡುಕಿ ಕೊಡ್ತೀನಿ. ಸಾವಿರಾರು ರೂಪಾಯಿ ವರದಕ್ಷಿಣೆ ಬಿದ್ದರೂ ನಾ ಕೊಡ್ತಿನಿ. ಇನ್ನೊಂದು ಶ್ರೀಕಾಂತ, ಆ ಹುಡಿಗ್ಗೆ ಯಾರೂ ಇಲ್ಲಂತ, ಒಳ್ಳೇದಾತ್ಯು, ನಾವು ನಮ್ಮ ಮಗಳಂತs ಭಾವಿಸ್ತೀವಿ. ಆದರ ನಮ್ಮ ಕಿಶೋರಿಯ ಸಂಸಾರ ಹದಗೆಡ ತಕ್ಕದ್ದಲ್ಲ, ಯಾಕ್ರಿ?

ಶ್ರೀಕಾಂತ:—ಅದು ಸರಿ, ಕಾಕಾ. ಆದರ ಇದು ನಿಮ್ಮ ಕಾಲದ ಎರಡನೇ ಮದಿವಿ ಅಲ್ಲ; ಈ ಕಾಲದ ಪ್ರೀತಿವಿವಾಹ ಅದ.

ಅಪ್ಪಾ:— ಹೌದ್ರ್ಯೋ! ಆದರು ಪ್ರತಿಯೊಂದು ವಿವಾಹ ಪ್ರೀತಿವಿವಾಹನs ಇರಬೇಕು ಅಂತ ಶಾಸ್ತ್ರ ಅದಯೇನು? ನಮ್ಮದೆಲ್ಲಿ ಆದ ಮುಣ್ಣಾಗ ಪ್ರೀತಿವಿವಾಹ? ಆದರ, ಇಪ್ಪತ್ತೇಳು ವರ್ಷ ನಾವು ಒಳ್ಳೇ ಸುಖದೊಳಗ ಕಳೀಲಿಲ್ಲೇನು? ಯಾಕ್ರೀ? (ಇಂದಿರಾಬಾಯಿ ತಟಸ್ಥ ನಿಲ್ಲುವರು.) ಈ ಪ್ರೇಮದ ಪೈರು ಇತ್ತೀಚಿಗೇ ಬಾಳ ಹುಲುಸಾಗಿ ಬೆಳೀತಾ ಅದ ಕಾಣಿಸ್ತದ. ಯಾವುದು ಕೇಳ್ತೀವಿ, ಅದೆಲ್ಲ ಪ್ರೀತಿವಿವಾಹ! ಹೌದರ್‍ಯೋ, ಪ್ರೀತಿಮಾಡಿರಿ, ಆದರ ಈ ವಿವಾಹ ಯಾಕ? ಮತ್ತ ಅದರಾಗ ಮೊದಲನೆ ಹೆಂಡತಿ ಜೀವದಿಂದಿರುವಾಗ ಈ ಪ್ರೀತಿವಿವಾಹ ಅಂದರ, ನಮಗಂತೂ ಬಿಲ್‌ಕುಲ್ ಮಾನ್ಯ ಇಲ್ಲ ನೋಡಪಾ!

ಶ್ರೀಕಾಂತ:—ಅಂದರ.... ನಿಮ್ಮ ಅಂಬೋಣ ಹೀಂಗ ಕಾಣಸ್ತದ ಕಾಕಾ, ಮೊದಲನೆ ಹೆಂಡತಿ ಜೀವಂತ ಇರುವಾಗ ಎರಡನೆ ಮದಿವಿ ಮಾಡಿಕೊಳ್ಳಲಿಕ್ಕೆ ಅಡ್ಡಿ ಇಲ್ಲ; ಆದರ ಅದು ಪ್ರೀತಿವಿವಾಹ ಮಾತ್ರ ಸರ್ವಥಾ ಇರಬಾರದು.

ಅಪ್ಪಾ:— ಅಲ್‌ಬತ್! ಎರಡು ಮದಿವ್ಯಾದರೂ ಇಬ್ಬರ ಹೆಂಡರ ಸಂಸಾರ ಸರಾಗವಾಗಿ ನಾಗೋದು ಶಕ್ಯದ. ಆದರ ಎರಡ ನೇದು ಪ್ರೀತಿವಿವಾಹ ಅಂದರ ಮಾತ್ರ ಮೊದಲನೆಯಾಕಿಯು ಸಂಸಾರಕ್ಕ ತಿಲಾಂಜಲಿಬಿಟ್ಟ್ಹಾಂಗs! ಇನ್ನ ಮೊದಲನೆಯಾಕಿ ಯಲ್ಲಿ ಏನಾದರೂ ಕುಂದಿದ್ದರ ಆ ಮಾತು ಬ್ಯಾರೆ. ಇಲ್ಲೆ ನೋಡಿದರ ಭಂಗಾರದಂಥ ಹೆಣ್ತಿ. ಹೋದವರ್ಷದವರೆಗೆ ನಮ್ಮ ಅಕ್ಕನ ಮ್ಯಾಲ ಇಂವಗ ಪ್ರೀತಿ ಇತ್ತು, ಈ ವರ್ಷ ಅಂಬೋದರಾಗs ಅದು ಹಾರಿಬಿಟ್ಟಿತು, ಮತ್ತ ಇನ್ನೊಬ್ಬಾಕೀ ಮ್ಯಾಲ ಕೂತಿತು! ಭಲಿರೆ ಪ್ರೀತಿ! ಮೊನ್ನಿನವರೆಗೆ ಇಂವ ಅಕ್ಕನ ಮ್ಯಾಲ ಮಾಡೋ ಪ್ರೀತಿ ನೋಡಿದರ, ನನಗೇನೋ ಅನಿಸ್ತಿತ್ತು: ಈ ಲಕ್ಷಣ ಸರಿಯಾಗಿಲ್ಲ ಅಂತ. ಯಾಕಂದರ ಇಂಥ ಯಾವ ಮನುಷ್ಯ ಒಬ್ಬಾಕಿಯ ಮ್ಯಾಲ ಪ್ರೀತಿ ಮಾಡ್ತಾನ, ಅಂವ ನಾಳೆ ಇನ್ನೊಬ್ಬಾಕಿಯ ಮ್ಯಾಲ ಪ್ರೀತಿ ಮಾಡವನs ಅಲ್ಲ! ಇವರಿಗಿಂತ ನಾವs ಮೇಲು ನಮಗ ನಿಮ್ಮ ಈ ಪ್ರೇಮದ ಕಂತ್ರಾಟs ತಿಳಿಯೂದಿಲ್ಲ, ಯಾಕ್ರ?

ಶ್ರೀಕಾಂತ:—ತಿಳೀತಿರಲಿಕ್ಕಿಲ್ಲ. ಎಷ್ಟೋ ಮಂದಿಗೆ ಇದು ತಿಳಿಯೂದೇ ಇಲ್ಲ ಅಂತಾರ ಕಾಕಾ.

ಅಪ್ಪಾ:— ಆದರ ಕವಿಗಳಿಗೂ ಲೇಖಕರಿಗೂ ಇದು ತಿಳೀತದ ಅಂತ ಕೇಳೀನಿ! ಡಾಕ್ಟರಿಗೆ ತಿಳೀತದ ಅಂಬೋದು ಈಗ ನಮ್ಮ ಅಳಿಯನ ಉದಾಹರಣೆಯ ಮ್ಯಾಲಿಂದ ಕಂಡs ಕಾಣಸ್ತದ. ಮತ್ತ ನಿನಗೊಬ್ಬಗ ತಿಳೀತದ. ಹಾಂಗ ನಿನಗ ಎಲ್ಲಾನೂ ತಿಳೀತದ ಅನ್ನು; ಹೀಂಗಂತ ನಿನ್ನ ಕಕ್ಕೀದಂತೂ ತಿಳಿವಳಿಕಿ

ಆಗೇದ. ನಮಗ ಈ ವಯಸ್ಸಿನೊಳಗ ಅದನ್ನ ತಿಳಕೊಳ್ಳುವ ಆಗತ್ಯವೂ ಇಲ್ಲ, ಅಪೇಕ್ಷಾನೂ ಇಲ್ಲ.

ಇಂದಿರಾ:— ಇನ್ನ ನನ್ನ ಅಂಬೋಣ ತುಸು ಕೇಳ್ತೀರೇನು? ವಸಂತ ರಾಯರ ಮದಿವಿ ಆ ಹುಡುಗಿಯ ಜತಿಗೆ ಆಗಬಾರದು ಅಂತ ನಿಮ್ಮ ಅಪೇಕ್ಷಾ ಅದಲ್ಲಃ? ಮತ್ತ ಆ ಹುಡುಗೀನ್ನ ಕಂಡು ನೀವು ಮಾತನಾಡುವವರಿದ್ದೀರಲ್ಲಃ? ಹಾಂಗಿದ್ದರ ಆಕೀ ಮನಸ್ಸು ಏನದ ಅಂಬೋದನ್ನ ತಿಳಕೊಳ್ಳೋದು ಬ್ಯಾಡಃ?

ಅಪ್ಪಾ:— ಅದರೊಳಗ ತಿಳಿಯೋದೇನದ? ಸಾದಾ ಮಾತದ ಅದು. ಆಕಿ ಚಿಕ್ಕ ವಯಸ್ಸಿನಾಕಿದ್ದಾಳ. ಲಗ್ನಾಗಬೇಕು ಅಂತ ಆಕೀಗೆ ಅನಿಸೋದು ಸ್ವಾಭಾವಿಕ ಅದ. ಅವಳ ಸಲುವಾಗಿ ನಾವು ಒಬ್ಬ ಬುದ್ಧಿವಂತ ಹುಡುಗನ್ನ ನೋಡೋಣ. ಆಕೀಗೆ ಡಾಕ್ಟರನಃ ಬೇಕಾಗಿದ್ದರ, ಅಂಥವನನ್ನೂ ದೊರಕಿಸೋಣ.

ಇಂದಿರಾ:— ಅಲ್ರಿ, ಆಕಿ ಡಾಕ್ಟರ ವಸಂತರಾಯನ್ನ ಪ್ರೀತಿಮಾಡ್ತಾಳ. ನೀವು ಹುಡುಕಿಕೊಂಡು ಬಂದ ಯಾವ ಹುಷಾರ್ ಡಾಕ್ಟರ-ನ್ನಾದರೂ ಆಕಿ ಪ್ರೀತಿಸ್ಯಾಳು ಅಂತ ನಿಮಗನಿಸ್ತದೇನು?

ಅಪ್ಪಾ:— ಅಂದರೇನು? ಹೆಂಗಸರು ಪ್ರೀತಿಮಾಡೋದು ಯಾವದಾದರೂ ಗುಣ ನೋಡೇ ಅಲ್ಲ?

ಇಂದಿರಾ:— ಆದರ ಡಾಕ್ಟರಿಕಿ ಇದು ಒಂದು ಉದ್ಯೋಗದಃ; ಗುಣ ಅಲ್ಲ.

ಅಪ್ಪಾ:— ಗುಣ ಅಲ್ಲ! ಎಲಾ ಇವನಃ! ನಿಮಗೂ ಈ ಪ್ರೇಮದ ಕಂತ್ರಾಟ ತಿಳೀಲಿಕ್ಕೆ ಹತ್ತಿತೋ ಏನು?

ಇಂದಿರಾ:— ಏನು ಅಸಹ್ಯ ಮಾತಿದು! ನಿಮಗ ಈ ಮದಿವೀ ಮುಂಬೇಕಾಗೇದಲ್ಲ? ಮತ್ತ ಅದೂ ಆ ಹುಡುಗಿಯ ಮನವೊಲಿಸಿ ಹೌದಲ್ಲೊ? ಹಾಂಗಿದ್ದರ, ವಸಂತರಾಯನ ಬದಲಾಗಿ ಬ್ಯಾರೆ ಹುಷಾರ್ ಹುಡುಗನ್ನ ತಂದು ನಿಲ್ಲಿಸ್ತೀವಿ, ಬೇಕಾದಷ್ಟು ವರದಕ್ಷಿಣೆ ಕೊಡ್ತೀವಿ—ಇಂಥಾ ಮಾತು ಆಕೀಯೆದುರಿಗೆ ತಗೀಬಾರದು ಅಂಬೋದನ್ನ ಲಕ್ಷ್ಯದಲ್ಲಿಡಿರಿ. ಆಕಿ ಕಲಿತ ಹುಡುಗಿ ಇದ್ದಾಳ. ಮತ್ತ ಅನೇಕ ಹುಷಾರ್ ಹುಡುಗರೂ

ಆಕಿಯ ಕಣ್ಣೆದುರಿಗೆ ಹಾಯ್ದುಹೋಗ್ಯಾರ. ಅವರೆಲ್ಲರ್‍ನ್ನೂ ಸರಿಸಿ, ಆಕಿ ವಸಂತರಾಯನ ಮ್ಯಾಲ ಪ್ರೀತಿ ಮಾಡ್ತಾಳ ಅಂದಮ್ಯಾಲ, ಅವಳ ಮನವೊಲಿಸೋದು ಬಿಟ್ಟು, ಅವಳ ಪ್ರೇಮದ್ದು ಹೀಂಗ ಚ್ಯಾಷ್ಟಿಮಾಡಿದರ ಹ್ಯಾಂಗ ನಡೆದೀತು?

**ಅಪ್ಪಾ:—** ಚ್ಯಾಷ್ಟಿಮಾಡಬ್ಯಾಡಿರಿ ಅಂದರ? ನಮಗ ಈ ಪ್ರೇಮನs ಮಂಜೂರಿಲ್ಲ!

**ಶ್ರೀಕಾಂತ:—**ಕಾಕಾ, ಎರಡನೇಯವರಿಂದ ಮಂಜೂರುಮಾಡಿಸಿಕೊಳ್ಳಲಿಕ್ಕೆ, ಪ್ರೇಮ ಅಂದರ ರಜೇದ ಅರ್ಜಿ ಆದವೇನು? ಮನುಷ್ಯ ಪ್ರೇಮಮಾಡೋದು ವ್ಯಕ್ತಿಯ ಮ್ಯಾಲ ಮಾಡ್ತಾನ; ಗುಣದ ಬೇರೀಜು ನೋಡಿ ಮಾಡೋದಿಲ್ಲ! ಇದs ನೋಡಿರೆಲ್ಲ, ಈ ಊರೊಳಗ ಹುಷಾರ್ ಡಾಕ್ಟರರೇನು ಕಡಿಮಿದ್ದಾರೇನು? ಕೆಲವರು ಅವಿವಾಹಿತರೂ ಇರಬಹುದು. ಆದರ ಅವರ್‍ಯಾರೂ ಈ ಹುಡುಗಿಯ ಕಣ್ಣಾಗ್ಲಿ ತುಂಬಲಿಲ್ಲ; ಮನಸ್ಸಿಗೆ ಹಿಡೀಲಿಲ್ಲ. ಮನಸ್ಸಿಗೆ ಹಿಡಿದವ ಅಂದರ ನಮ್ಮ ಅಕ್ಕನ ಗಂಡ. ಈ ಪ್ರೇಮದ ತಂತ್ರ ಅಂದರ ಹೀಂಗ ಚಮತ್ಕಾರದ್ದದ, ಕಾಕಾ! ಇಂಥ ಒಂದು ವಿಶಿಷ್ಟಗುಣದವ ಪ್ರೇಮಕ್ಕ ಲಾಯಖ ಅನ್ನೋದು ನಿರ್ಣಯಿಸಲಿಕ್ಕೆ ಬರ್‍ತಿದ್ದರ, ಮತದಾರರ ಪಟ್ಟೀಹಾಂಗ ಪ್ರೇಮಕ್ಕ ಯೋಗ್ಯರಾದ ಜನರ ಪಟ್ಟೀ ಕೂಡ ತಯಾರ್ ಮಾಡಬಹುದಾಗಿತ್ತು! ಆದರ ಇಂಥಾ ಯಾದೀ ತಯಾರ್ ಮಾಡಲಿಕ್ಕೆ ಬರೋದಿಲ್ಲ ಅನ್ನೋದs ದುರ್ದೈವ!

**ಅಪ್ಪಾ:—** ಅಂದಮ್ಯಾಲ ಈ ಪ್ರೀತಿವಿವಾಹ ನಮ್ಮ ಕಣ್ಣೆದುರಿಗೆ ನಡೀತಿದ್ದರೂ, ನಾವು ಅದನ್ನ ತೆಪ್ಪಗ ನೋಡಬೇಕು ಅಂತ ನಿಮ್ಮಿಬ್ಬರ ಅಭಿಪ್ರಾಯ ಹಂಗಾರ.

**ಶ್ರೀಕಾಂತ:—**ಹಾಂಗಲ್ಲ ಕಾಕಾ, ಹೆದರಿಕಿ ಬೆದರಿಕಿ ತೋರಿಸಿ ಅಥವಾ ವಸಂತನ ಬದಲಾಗಿ ಇನ್ನೊಬ್ಬನ್ನ ತಂದುನಿಲ್ಲಿಸಿ ಇದು ಆಗೋ ಮಾತಲ್ಲ.... ಇಷ್ಟs ನಮ್ಮ ಅಭಿಪ್ರಾಯ.

ಅಪ್ಪಾ:— ಹೆದರಿಕಿ ಬೆದರಿಕಿ ತೋರಿಸದಿದ್ದರ, ಮತ್ತೇನು ಆ ಹುಡುಗಿಯ ಕಾಲುಬೀಳು ಅಂತೀರೇನು ನೀವು?

ಶ್ರೀಕಾಂತ:—ಪ್ರಸಂಗಬಿದ್ದರ ಅದನ್ನೂ ಮಾಡಲಿಕ್ಕೆ ತಯಾರಾಗಬೇಕಾದೀತು. ನಾವು ಆ ಹುಡುಗಿಯ ಮನಸ್ಸು ತಿರುಗಿಸಬೇಕು ಅಂತೀವಿ. ನಿಮ್ಮ ಈ ಒತ್ತಾಯ-ಬಲಾತ್ಕಾರಗಳಿಂದ ಹೃದಯ ಪರಿವರ್ತನ ಆಗ್ತಿರೋದಿಲ್ಲ, ಕಾಕಾ.

ಅಪ್ಪಾ:— ಛೆ, ಛೆ, ಈ ನಿಮ್ಮ ಹೃದಯಪರಿವರ್ತನದ ತಂತ್ರ ನಮಗಂತೂ ಸುತರಾಂ ಸಮ್ಮತ ಇಲ್ಲ. ನಮಗ ಒಂದು ಹಾದಿ ತಿಳೀತದ. ವಿರೋಧಮಾಡೋದಿದ್ದರ ಸೆಡ್ಡು ಹೊಡೆದು ನಿಲ್ಲೋದು!

ಶ್ರೀಕಾಂತ:—ಹೌದು, ಕುಸ್ತಿಗೆ ನೀವು ನಿಲ್ಲುವರು; ಯಾರ ಜತಿಗೆ? ಈ ಕುಸ್ತಿ ವ್ಯಕ್ತಿಯ ಜತಿಗಿಲ್ಲ, ಮಾನವೀ ಅಂತಃಕರಣದ ಜತಿಗದ. ಮತ್ತ ಇವತ್ತಿನವರೆಗೆ ಬಳಸಿದ ಪೇಚು ಇವರಲ್ಲಿ ಉಪಯೋಗಕ್ಕೆ ಬರಲಾರವು.

ಅಪ್ಪಾ:— ಇದು ನೋಡು ಶ್ರೀಕಾಂತ, ನಮಗ ಈ ನಿಮ್ಮ ಮಾರ್ಗ ಅರ್ಥಾಗೋದಿಲ್ಲ. ನಿನ್ನ ಕಕ್ಕಿಗೆ ಇವು ತಿಳೀತಾವ, ಮತ್ತ ಒಪ್ಪಿಗೀನೂ ಆಗ್ತಾವ. ನಾವು ನಿಮ್ಮೆಲ್ಲರಕಿಂತ ನಾಲ್ಕು ಮಳಿಗಾಲ ಹೆಚ್ಚು ಕಂಡಿವಿ. ನಿಮ್ಮ ಈ ಒಲಿಸೋ—ಒಪ್ಪಿಸೋ ಉಪಾಯಗಳಿಂದ ಏನೂ ಆಗೋಹಾಂಗಿಲ್ಲ ಅಂಬೋದು ನನಗ ಪಕ್ಕಾ ಗೊತ್ತದ. ಶ್ರೀಕಾಂತ, ನೀವು ಈ ವಿಷಯಕ್ಕ ಏನು ಮಾಡೋದನ್ನೋದರ ಬಗ್ಗೆ ಬೇಕಾದಷ್ಟು ಚರ್ಚಾಮಾಡಿರಿ. ಪ್ರತ್ಯಕ್ಷ ಕಾರ್ಯಮಾಡೋದನ್ನ ನಾವು ಮಾಡಿಬಿಡ್ತೀವಿ.

(ಅಪ್ಪಾರಾಯರು ಹೋಗುತ್ತಾರೆ.)

ಶ್ರೀಕಾಂತ:—ಕಕ್ಕಿ, ಏನಿದು, ಈ ರೀತಿ? ತಾವೂ ಅದೇ ತಪ್ಪು ಮಾಡಿರುವಾಗ, ಕಾಕಾ ಅವರು ಅಳಿಯನ ಮ್ಯಾಲ ರೇಗತಾರ, ಮತ್ತ ಪರಾಯಾ ಹುಡಿಗ್ಗೆ ಬೆದರಿಕಿ ಹಾಕೋ ಮಾತು ಆಡ್ತಾರ.

ಅತ್ತ, ಬೇಬೀನೂ ಸಭಾದೊಳಗ ಭಾಷಣಮಾಡಿ ಸ್ತ್ರೀಯರ ಮ್ಯಾಲ ದೋಷ ಹೊರಿಸ್ತಾಳ. ತುಸು ಸುಮ್ಮನಿರು ಅಂತ ಯಾಕ ನೀವು ಆಕೀಗೆ ಹೇಳೋದಿಲ್ಲ? ಮತ್ತ ಇನ್ನೂ ನಿಮ್ಮ ಮದಿವಿಯ ಬಗ್ಗೆ ಏನೂ ಹೇಳದೆ, ಅಜ್ಞಾನದೊಳಗ ಆಕಿನ್ನ ಯಾಕಿಟ್ಟೀರಿ? ನಿಮ್ಮ ಈ ಮುಚ್ಚು-ಮರಿ ವರ್ತನದಿಂದs ಇಂಥ ವಿಲಕ್ಷಣ ಪರಿಸ್ಥಿತಿ ಉಂಟಾದದ್ದು.

ಇಂದಿರಾ:— ಇತ್ತೀಚೆ ಹಗಲೆಲ್ಲ ಹೀಂಗs ನಡಿದದ, ನಮ್ಮಪ್ಪಾ!

ಶ್ರೀಕಾಂತ:—ಕಕ್ಕಿ, ಖಂಡಿತವಾಗಿ ನೀನು ದೊಡ್ಡ ತಪ್ಪು ಮಾಡಿದಿ. ಇವಕ್ಕೆ ಮೊದಲs ನೀನು ನಿನ್ನ ಮದಿವೀ ಇತಿಹಾಸ ಮಕ್ಕಳ ಮುಂದ ಯಾಕ ಹೇಳಲಿಲ್ಲ? ಹೇಳಿದ್ದರ, ಈಗಿನ ಪರಿಸ್ಥಿತಿಯೊಳಗ ಅವರ ಜತಿಗೆ ಮನಬಿಚ್ಚಿ ಮಾತನಾಡಲಿಕ್ಕಾದರೂ ಬರ್ತಿತ್ತು.

ಇಂದಿರಾ:— ಹೌದು, ಶ್ರೀಕಾಂತ, ನಾ ಹೇಳದೆ ಇದ್ದದ್ದು ನಿಜ. ಆದರ ಆಗ ಅಂಥಾ ಹೇಳೋ ಪ್ರಸಂಗನs ಬರಲಿಲ್ಲ. ಮತ್ತ ಈಗ ಬಂದದ್ದು ಒಮ್ಮೆಲೆ ಸಿಡಿಲೆರಗಿಧಾಂಗs ಬಂತು! ನೀನs ವಿಚಾರಮಾಡು, ನನ್ನ ಲಗ್ನಾತ್ಯ, ಆಗೋ, ಪುರಸತ್ತಿಲ್ಲದ ನಿನ್ನ ಮೊದಲಿನ ಕಕ್ಕಿ, ಸಿಟ್ಟುಮಾಡಿಕೊಂಡು ಒಮ್ಮೆಲೆ ಬ್ರಹ್ಮದೇಶದೊಳಗಿರೋ ತಮ್ಮ ಅಣ್ಣನ ಕಡೆಗೆ ಹೋಗಿ ಬಿಟ್ಟರು. ನಮ್ಮ ಅತ್ತಿಯವರಿಗಂತೂ ಅವರ ಹೆಸರೆತ್ತಿದ್ದು ಕೂಡ ಸೇರ್ತಿದ್ದಿಲ್ಲ. ಅಂತ ಮನಿಯಲ್ಲಿ ಆ ಮಾತs ಹೊರಡ ತಿರಲಿಲ್ಲ. ನಾವು ವರ್ಗಾವರ್ಗಿ ಮ್ಯಾಲ ಊರೂರು ಹೋಗ ತಿದ್ದದ್ದರಿಂದ, ನಮ್ಮ ಸುತ್ತಮುತ್ತಲಿನ ಮಂದಿಗೂ ಅದು ತಿಳಿಯೋ ಕಾರಣ ಬೀಳಲಿಲ್ಲ. ಮುಂದ ಹೆಣ್ಣು ಹುಡುಗೇರು ದೊಡ್ಡವರಾದರು; ಅತ್ತಿಯವರೂ ಸ್ವರ್ಗಸ್ಥರಾದರು. ಅದೇ ಸಮಯಕ್ಕs ನಿನ್ನ ಆ ಕಕ್ಕಿ ಕೂಡ ಬ್ರಹ್ಮದೇಶದಲ್ಲಿ ತೀರಿ ಕೊಂಡದ್ದರಿಂದ, ಈ ಪ್ರಕರಣ ಕೊನೆಯದಾಗಿಯೇ ಮುಗಿದು ಹೋಯಿತು. ಅಂದಮ್ಯಾಲ ನೀನೇ ಹೇಳು, ನಮ್ಮ ಹುಡು ಗೇರಿಗೆ ಹೇಳೋ ಅಗತ್ಯ ನನಗೆಲ್ಲಿತು ?

ಶ್ರೀಕಾಂತ:—ಹೌದವಾ ಕಕ್ಕಿ, ನೀ ಅನ್ನೋ ಮಾತು ಖರೆ, ಆದರ....
ಇಂದಿರಾ:— ಅದನ್ನೇ ಹೇಳ್ತಿನಲ್ಲೊ; ಈ ವಸಂತರಾಯನ ಪ್ರಕರಣ ಸುರುವಾದಾಗಿನಿಂದ, ನನ್ನ ಜೀವ ಹಗೇದೊಳಗ ಒಗೆಧಾಂಗ ಆಗೇದ. ಅದರ ಕಲ್ಪನಾ, ನಿನ್ನ ಹೊರ್ತು ಬೇರೆಯವರಿಗೆ ಬರಲಾರದು. ಇವರ ಹಾದಿ ಒಂದು, ಬೇಬಿಯದು ಇನ್ನೊಂದು. ಅಕ್ಕು ಅಂತೂ ಈ ವಿಷಯದಲ್ಲಿ ಮಾತೇ ಆಡುವಹಾಂಗಿಲ್ಲ ಅಂತ ನಿರ್ಣಯಿಸಿಕೊಂಢಾಂಗ ಕಾಣಿಸ್ತದ. ನಾನಾದರೂ ಮಾಡಲೇನು? ಅಂತೇ ಪತ್ರ ಕಳಿಸಿದೆ ನಿನಗ. ಅನಿಸಿತು, ಈ ಪ್ರಸಂಗದೊಳಗ ವಸಂತರಾಯನ ಕೂಡ ನೀನೇನಾದರೂ ಮಾತಾಡಬಹುದು ಅಂತ.
ಶ್ರೀಕಾಂತ:—ನೀ ಅಂದುಕೊಂಡದ್ದು ಸರಿ ಕಕ್ಕಿ. ಆದರ ವಸಂತರಾಯನಂಥ ಸ್ವಭಾವದ ಮನುಷ್ಯನ್ನ ಅವನ ನಿಶ್ಚಯದಿಂದ ಪರಾವೃತ್ತ ಗೊಳಿಸೋದು ಬಹಳ ಕಠಿಣದ! ಮೊದಲೇ ಅಂವ ಗಂಡುಸು, ಅದರಾಗ ಹಟದ ಸ್ವಭಾವ. ಇಂಥ ಮನುಷ್ಯ, ಪ್ರೇಮದ ಚಕ್ರದಾಗ ಸಿಕ್ಕಿಬಿದ್ದ ಅಂದರ, ಅದರೊಳಗಿಂದ ಹೊರಗ ತಗಿಯೋದು ಬಹಳ ದುಸ್ತರ!
ಇಂದಿರಾ:— ನಿನ್ನ ಮಾತು ಖರೆ ಅದ, ಶ್ರೀಕಾಂತ. ಬಹಳಾದರ ವಸಂತ ರಾಯನ, ಈ ಮದಿವಿ ಆಗಬಾರದು ಅಂತ ನಾವು ಸಾಯಾಸ ಪಡೋದು. ಏನಃ ಆದರೂ ಅಕ್ಕೂನ ಸಂಸಾರ ಅಂದರ, ಸದ್ಯಕ್ಕ ಒಂದು ಆಣಿ ಬಿಟ್ಟ ಕಾಯಿ ಆತ್ಯು. ಇನ್ನ ಮುಂದ ಲೌಕಿಕದೃಷ್ಟಿಗೆ ಅಂತ ಹ್ಯಾಂಗೋ ಸಂಸಾರ ಮಾಡೋದು, ಆತ್ಯು. (ತುಸು ವಿಚಾರಮಾಡಿ) ಖರೆ ಹೇಳಲಿ, ಶ್ರೀಕಾಂತ, ನನ್ನ ಮನಸ್ಸಿನಲ್ಲಂತೂ ಕ್ಷಣ ಕ್ಷಣಕ್ಕೂ ಆ ಹುಡುಗಿಯ ಬಗ್ಗೇ ವಿಚಾರ ಬರ್ತಾವ. ಅನಿಸ್ತದ, ಕಾಣಾಕಾಣಾ ಬೆಂಕಿಯಲ್ಲಿ ಹಾರಿಕೊಳ್ಳೋದಕ್ಕ ಆ ಹುಡುಗಿ ತಯಾರಾಗೇದಲ್ಲ ಅಂತ. ಸವತೀಮ್ಯಾಲ ಸಂಸಾರ ಅಂದರ, ಬಾಯೊಳಗ ಚೆಂಡು ತುರುಕಿ ಗುದ್ದಿಕಿ ಕೊಟ್ಹಾಂಗ ಅಂಬೋದು ಅವಳ ಕಲ್ಪನೆಯಲ್ಲೂ

ಇರಲಿಕ್ಕಿಲ್ಲ. ನಾಳೆ, ಈ ಲಗ್ನ ಆತ್ಯು ಅಂದರ, ಆಕಿ ಬದಿಕಿ ಬಾಳ್ವೆ ಮಾಡೋದs ಅಶಕ್ಯಮಾಡಿ ಇಟ್ಟಾರು ನಮ್ಮವರು. ಇವರೇನು ಸಾಮಾನ್ಯರಲ್ಲ.

**ಶ್ರೀಕಾಂತ**:—ಹೌದು. ಕಾಕಾ ಅವರಿಗೆ ಇಂಥಾದು ಮಾಡೋ ಅಗತ್ಯನs ಬೀಳದಿದ್ದರ ಬಹಳ ಒಳ್ಳೇದು.

**ಇಂದಿರಾ**:— ಅದಂತೂ ಸರೀನೊ. ಅದಕ್ಕs ನಿನ್ನ ಇಷ್ಟು ಅವಸರದಿಂದ ಕರೆಸಿದ್ದು. ನೀನು ವಸಂತರಾಯಗ ಏನಾದರೂ ಹೇಳಿ ಇದನ್ನ ಸರಿಪಡಿಸಿದರ, ಈ ಮರ್ಯಾದಿಗೇಡು ಜೀವನ ತಗಿಯುವ ಅಕ್ಕನ ಮ್ಯಾಲಿನ ಪ್ರಸಂಗ ನಿವಾರಣೆಯಾದೀತು.

**ಶ್ರೀಕಾಂತ**:—ಆಗಲಿ, ನಾ ವಸಂತನ್ನ ಕಾಣತೀನಿ, ಮತ್ತ ನೋಡ್ತೀನಿ ಯಾವ ಮಜಲಿಗೆ ಮುಟ್ಯದೋ ಪ್ರಕರಣ. ಅಲ್ಲಿ ನಿರಾಶೆ ಆತ್ಯು ಅಂದರ, ಆ ಹುಡುಗಿಯ ಪರಿಚಯ ಮಾಡಿಕೊಂಡು, ಅವಳ ಮನವೊಲಿಸುವ ಪ್ರಯತ್ನ –ನನ್ನ ರೀತಿಯಿಂದ– ಮಾಡಿನೋಡ್ತೀನಿ. ಆದರ ಕಕ್ಕಿ, ಇದೆಲ್ಲ ಆಗೋತನಕ ನೀ ಹ್ಯಾಂಗಾರಮಾಡಿ ಕಾಕಾ ಅವರನ್ನ ಸಂಭಾಳಿಸಿ ಒಡಿ. ಅವರಿಗೆ ನೀನು ಹಿಂಗ ಹೇಳ್ಳಿಕ್ಕೂ ಅಡ್ಡಿಯಿಲ್ಲ: ನೀವು ಹಿಂಗ ಗೊಂದಲ ಎಬ್ಬಿಸಿದರ ಮಾತ್ರ ವಸಂತ ಪೂರಾನs ತಾಳಗೆಟ್ಟು ಮದಿವಿ ಮಾಡ್ಕೊಳ್ಳೋದs ನಿಜ, ಮತ್ತ ಹಾಂಗಾದರ ಇದು ಇಡೀದs ಕೆಟ್ಟುಹೋಗೋದು ಖಂಡಿತ.

**ಇಂದಿರಾ**:— ಆಗಲೆಪ್ಪಾ, ಹೇಳಿ ನೋಡ್ತೀನಿ. ಇವರ ಸ್ವಭಾವಂತೂ ನಿನಗ ಗೊತ್ತs ಆದ. ಯಾರಿಗ್ಗೊತ್ತು ಕೇಳ್ತಾರೋ ಇಲ್ಲೊ.

**ಬೇಬಿ**:— **(ಹೊರಗೆ ಬಂದು)** ಅವ್ವಾ, ದಾದಾ, ಚಹಾಕ್ಕ ಬರ್ತೀರಲ್ಲ? ಅಪ್ಪ ಕೂತಾರ ನಿಮ್ಮ ಸಲುವಾಗಿ ಕಾದುಕೊಂಡು.

## ಅಂಕ ೨

[ಡಾ. ವಸಂತರಾಯನ ಮನೆ. ವಸಂತರಾಯ ಏಕಾಕಿಯಾಗಿ ಇದ್ದಾನೆ. ಅವನ ವಯಸ್ಸು ಸುಮಾರು ಮೂವತ್ತುಮೂರು ವರ್ಷ. ಚೆನ್ನಾದ ರೂಪ. ಸದ್ಯಕ್ಕೆ ತುಸು ಕದಡಿದ ಮನಸ್ಥಿತಿಯಲ್ಲಿ ಕಾಣುತ್ತಾನೆ. ಗಂಟೆಯಾಗುತ್ತದೆ. ಚೈತನ್ಯ ಬಾಗಿಲನ್ನು ತೆರೆದು ಒಳಗೆ ಬರುತ್ತಾನೆ. ಇವನೊಬ್ಬ ಇಳಿವಯಸ್ಸಿನ ಪರಪ್ರಾಂತದ ಗೃಹಸ್ಥ.]

ವಸಂತ:— ಓ ಚೈತನ್ಯ! ನೀವು ಈಗ—ಈ ಹೊತ್ತಿನಲ್ಲಿ ಬಂದಿರಿ?

ಚೈತನ್ಯ.— ವಸಂತ, ನೀವು ಎನಿಕ್ ಮಾಫ್ ಮಾಡಿರಿ. ನಿಮ್ಮ ಉಷಾ ಯಾತ್ರಿಕೆ ಹೋಗಿದಾಳೆ. ನಾನು ಈ ಕಡೆ ಬಂದೆ.

ವಸಂತ — ನನಗ ಅರ್ಥಾಗಲಿಲ್ಲ. ಉಷಾ ಟ್ರಿಪ್ಪಿಗೆ ಹೋದಳು ಅಂತ ನೀವು ಇಲ್ಲಿಗೆ ಬಂದಿರೊ?

ಚೈತನ್ಯ:— ಅರೆ ಡಾಕ್ಟರ್, ಅವಳ್, ಇವಡೆ ಉಂಡೆಂಗಿಲ್ಲ. ನೀವು ಅವಳ ಹತ್ತರ ಕುಶಲ ಮಾತನಾಡತಿದ್ದರು. ನಾನು ಸತ್ಯಂ ಹೇಳುತ್ತೇನೆ. ನೀನು ಕೇಳ್ತಿಯೊ?

ವಸಂತ.— ಓಹೊ ನಿಮ್ಮ ಮಾತು ಕೇಳದಿದ್ದರ ಹ್ಯಾಂಗ? ಅವಶ್ಯ ಕೇಳೋಣ.

ಚೈತನ್ಯ:— ನಾನು ವೃದ್ಧ, ಉಪದೇಶಂ ಕೊಡುತ್ತೇನೆ. ಈ ಉಷಾ affair ತೀರ್ತು ಕಳವಿನ್. ನನಕ್ಕೆ ಅವಳ ಕಷ್ಟಪಾಡು ಸಹಿಕಾನ್ ಸಾಧ್ಯಮಿಲ್ಲ. ನೀವು ಎಂದಿನ ಕಲ್ಯಾಣಂ ಮಾಡೂದಿಲ್ಲಾ. ಚುಮ್ಮ ಸ್ನೇಹಮಾಡುತಿ— ಹಾಗಾದರ ಎಂದಿನ ಕಲ್ಯಾಣಂ ಮಾಡ್ಲೀ ಕೂಡದು?

ವಸಂತ:— ಇಲ್ಲ, ಚೈತನ್ಯ, ನಾವು ಸದ್ಯಕ್ಕೆ ಮದಿವಿಯ ವಿಚಾರವನ್ನೇ ಮಾಡ್ತ ಇದ್ದೇವೆ.

ಚೈತನ್ಯ:— ವಿಚಾರಿಚು, ವಿಚಾರಿಚು, ಎತ್ರ ವಿಚಾರಿಕುನ್ನು? ಎಂದಿನ ತುಂಬ ವಿಚಾರಮಾಡಲಿಲ್ಲೆ? ಇತ್ರ ಪ್ರಾಣನಿಂಗಿಲ್ ಯಾಕೆ

ಕಲ್ಯಾಣಂ ಮಾಡಕೂಡದು? ನಿನ್ನೆ ದೇಪ್ಪ್ಯ ಬಂದು ಅವಳ ಹತ್ರ ಕೇಳಿದೆ. ನಿನಕ್ಕೆ ಡಾಕ್ಟರುಡೆ ಹತ್ತಿರ ಹೋಗಲಿಕ್ಕೆ ವಿಡಿಲ್ಲಾ. ಡಾಕ್ಟರ್, ಎನಿಕ್ಕೆ ಒಳರೆ ದುಃಖಬಂದಿದೆ. ಪೆಣ್ ಮೋಸಮಿಲ್ಲಾ. ಬ್ರಮ್ಹದೇಶತ್ತಿಲಿಂದಲೆ ಎನಿಕ್ಕ ಅವಳ ಮೇಲೆ affection ಇತ್ತ ಕಷ್ಟವಾಡ್ ಸಹಿಸು ಬ್ರಮ್ಹದೇಶ ದಿಂದ ಇಲ್ಲಿಗೆ ಒನ್ನು. ಅವಳ ಕಲ್ಯಾಣಂ ಆಯಿಮುಂಗೆ ಸಂತೋಷತೊಡೆ ತಿರಿಗಿ ಹೋಗತೆನೆ. ವೆರೋರು ಹೆಂಡತಿ ಇದ್ದರೆ ಎಂದಾಯಿ? ನಾವು ಹಿಂದು ಜನಂಗಳ್ ಹಾಗೆ ಮಾಡಿಕೊಳ್ತೇವೆ. ಕೃಷ್ಣದೇವನುಂ ಅನೇಕ ಹೆಂಡತಿ ಮಾಡ್ ಇದ್ದರು. ಅವಳನ್ನ ನಿಮ್ಮ ಬಾರ್ಯ ಮಾಡಿದರೆ ಅವಳೆ ನಿಂಗಳ್‌ಪೊಡು ನನ್ನಾಯಿ ನಡವಾಳು.

**ವಸಂತ.**— ಉಷಾ ಟ್ರಿಪ್ ಮುಗಿಸಿಕೊಂಡು ಬಂದಕೂಡಲೆ, ನಾವು ಅದನ್ನ ನಿಶ್ಚಯಿಸಿಬಿಡ್ತೇವಿ.

**ಚೈತನ್ಯ:**— ಕಲ್ಯಾಣಂ ನಿಶ್ಚಯಂ ಮಾಡಿದರೆ ನನ್ನಾಯಿ ಇರುನು. ಕಲ್ಯಾಣಂ ಮಾಡದೆ ಇದ್ದರೆ ಅವಳೆ ನಿನಕ್ಕ ಕಾಣಾಲ್ ಸಾಧ್ಯಮಿಲ್ಲ. ಇಷ್ಟು ದಿನ ಕಾತು ಸಾಕಾಯಿತು.

**ವಸಂತ:**— ಹೀಗಿದೆ ನೋಡ್ರಿ, ಚೈತನ್ಯ, ಮದಿವಿ ನಿಶ್ಚಯಿಸಿಕೊಳ್ಳೋದ ಕ್ಕಾದರೂ ನಾವಿಬ್ಬರೂ ಪರಸ್ಪರರನ್ನ ಕಾಣಬೇಕಲ್ಲ?

**ಚೈತನ್ಯ:**— ಹಾಗಾದರೆ ಅವಳೆವನ್ನು ಕೂಡಿಕಂಡು ನಿಶ್ಚಯಮಾಡಿರಿ.

**ವಸಂತ:**— ಅದಕ್ಕ ಆಕಿ ಟ್ರಿಪ್‌ದಿಂದ ಬಂದಕೂಡಲೆ ನನಗ ತಿಳಿಸ್ತೀರಲ್ಲ?

**ಚೈತನ್ಯ:**— ಹಂ, ಇದು ತಿಳಿದಿರುವಿನ್, ನಾನು ಹೋಗತೇನೆ.

(ಹೋಗುತ್ತಾನೆ. ಡಾಕ್ಟರು ಅಸ್ವಸ್ಥಮನಸ್ಥಿತಿಯಲ್ಲಿ ಕುಳಿತಿರುತ್ತಾನೆ. ತಾಸು ಹೊತ್ತಿನಲ್ಲಿ ಪುನಃ ಗಂಟೆ ಆಗುತ್ತದೆ.)

**ವಸಂತ:**— ಒಳಗ ಬರ್ರಿ, ಯಾರು? ಬಾಗಿಲು ತೆರೆದದ್ದ ಅದ.

**ನೇಮೂ:**— (ಬಾಗಿಲಲ್ಲಿ ನಿಂತು) ನಾ ನೇಮೂ.

**ವಸಂತ:**— ಯಾಕ ನೇಮೂ? ಏನಾದರೂ ಹೇಳಿ ಕಳಿಸ್ಯಾರೇನು?

ನೇಮೂ:— ಹೌದರೆಪ್ಪಾ ಽವರ. ಅಕ್ಕವ್ವಾಽವರ ಬರಽವರಿದ್ದರ್ರಿ, ಸಿರಿಕಾಂತಪ್ಪನೋರು ಬಂದಾರ್ರಿ. ಅದಕಂತಽ ಎಡ್ಡುದಿನ ಇದ್ದು ಬರ್ತಾರಂತ್ರಿ. ಹೇಳಾಕ ಹೇಳಿದರ್ರಿ.

ವಸಂತ:— ಯಾರು ಶ್ರೀಕಾಂತ ಬಂದಾನ? ಯಾವಾಗ ಬಂದ?

ನೇಮೂ:— ನಿನ್ನೆ ಮುದ್ಯಾಣದಾಗರಿ.

ವಸಂತ:— ಹಿಂಗ? ಇನ್ನೂ ನನ್ನ ಕಡಿಗೆ ಬರಲಿಲ್ಲ? ಒಳ್ಳೇದು. ಇದು ನೋಡು ನೇಮೂ, ನಿಮ್ಮ ಅಕ್ಕೂಗ ಹೇಳು, ತುಸು ಕೆಲಸದ ಬಂದು ಮತ್ತ ಹೋಗು ಅಂತ.

ನೇಮೂ:— ಹೇಳ್ತೀನ್ರಿಯಪ್ಪಾ. (ನೇಮೂ ನಿಂತೇ ಇರುವದನ್ನು ನೋಡಿ)

ವಸಂತ:— ಯಾಕ ನೇಮೂ? ಮತ್ತೇನಾದರೂ ಹೇಳೋದದ ಏನು?

ನೇಮೂ:— ಏನಿಲ್ರಿ, ಅಕ್ಕಾಽವರು ಹೇಳಿದ್ದರ್ರಿ—ಕಸಗಿಸಬಳಿಮು, ಆಟು ಈಟು ಕೆಲಸಿದ್ದರ ಮಾಡಿ ಬಾ ಅಂತ. ಹಣಮಂತ ಇಲ್ಲ ಬ್ಯಾರೆ.

ವಸಂತ:— ಹಣಮಂತ ನಿನ್ನೇ ಕೆಲಸಕ್ಕ ಬಂದಾನ, ನೀ ಹೋಗು. (ಆದರೂ ನೇಮೂ ನಿಂತಿರುವದನ್ನು ಕಂಡು)

ವಸಂತ:— ಮತ್ತೇನು?

ನೇಮೂ:— (ನೇಮೂ ಸೆರಗಿನಲ್ಲಿ ಮುಚ್ಚಿ ತಂದ ಡಬ್ಬಿಯನ್ನು ಹೊರತೆಗೆದು) ಏಽಽನಿಲ್ರಿ, ದೊಡ್ಡ ಬಾಯೇರು ಈ ಫರಾಳದ ಡಬ್ಬೀ ಕೊಟ್ಟಾರ್ರಿ.

ವಸಂತ:— (ಅದು ಬೇಡಾದವರಂತೆ) ಫರಾಳದ ಡಬ್ಬಿಕೊಟ್ಟಾರ? ಇಡು ಅಲ್ಲೆ. ಒಳ್ಳೇದು ನೀಹೋಗು.

(ನೇಮೂ ಹೊರಡುತ್ತಾಳೆ. ಅದೇ ಹೊತ್ತಿಗೆ ಎದುರಿಗೆ ಉಷಾ ಬಂದು ನಿಂತಿರುತ್ತಾಳೆ. ಒಂದು ಕ್ಷಣ ಪರಸ್ಪರರು ನೋಡುತ್ತಾರೆ. ನೇಮೂ ಹೋಗುತ್ತಾಳೆ. ವಸಂತ ತೀರ ವಿಷಣ್ಣನಾಗಿ ಮೇಜಿನ ಹತ್ತಿರದ ಕುರ್ಚಿಯ ಮೇಲೆ ಕುಳಿತಿರುತ್ತಾನೆ. ತಲೆಗೆ ಕೈಹಚ್ಚಿಕೊಂಡು ತುಂಬ ವಿಚಾರಮಗ್ನನಾಗಿದ್ದಂತೆ ಕಾಣುತ್ತದೆ. ಅವನ ಲಕ್ಷ್ಯವನ್ನು ತನ್ನ ಕಡೆಗೆ ಸೆಳೆದುಕೊಳ್ಳುವದಕ್ಕಾಗಿ ಉಷಾ

ತೆರದಿದ್ದ ಕುರ್ಚಿಯು ಮೇಲೆ ತನ್ನ ಪರ್ಸ್ ಜೋರಿನಿಂದ ಒಗೆಯು ತ್ತಾಳೆ. ಆ ಸಪ್ಪಳ ಕೇಳಿ ವಸಂತ ವಿಚಾರದ ತಂದ್ರಿಯಿಂದ ಎಚ್ಚತ್ತವನಾಗಿ)

ವಸಂತ:— ಯಾರು, ಉಷಾ? ಗೆಳತಿಯರ ಜತಿಗೆ ನೀನು ಟ್ರಿಪ್ಪಿಗೆ ಹೋಗಿ ದ್ದಿಲ್ಲs?

ಉಷಾ:— ಹುಂ.

ವಸಂತ:— ಮತ್ತ ಹೋಗಲೇ ಇಲ್ಲೇನು?

ಉಷಾ:— ಹೋಗಿದ್ದೆ.

ವಸಂತ:— ಹೋಗಿದ್ದಿ? ಮತ್ತ ಇಷ್ಟು ಲಗು ತಿರುಗಿಬಂದಿ? ಎರಡು ದಿವಸದವ್ಯಾಲ ತಿರುಗಿ ಬರುವಾಕಿದ್ದಿಲ್ಲ?

ಉಷಾ:— ಹೌದು. ಮುಂಚೇ ಬಂದೆ.

ವಸಂತ:— ಯಾವಾಗ ಬಂದಿ?

ಉಷಾ.— ಇವೇ. ಅಲ್ಲಿಂದ ಬಂದಾಕಿ, ಹೀಂಗs ಬಂದೆ.

ವಸಂತ:— ಅಂದರೇನು?

ಉಷಾ:— ಅಂದರೇನು, ವಸಂತ, ಗೆಳತಿಯರ ಸಹವಾಸದಲ್ಲಿ ಅಡ್ಡಾ ಡೋದು ನನಗ ಅಶಕ್ಯ ಆತ್ಯ.

ವಸಂತ:— ಅಂತ ಗೆಳತಿಯರ್ನ ಅರ್ಧ ಹಾದಿಯಲ್ಲೇ ಬಿಟ್ಟುಬಂದಿ? ಉಷಾ, ನಿನ್ನ ತಲಿತಿರುಗೇದs ಅಂತ ಅವರು ಖಂಡಿತವಾಗಿ ತಿಳಕೊಂಡಿರಬೇಕು.

ಉಷಾ:— ಸಂಶಯ ಯಾಕ? ಅದು ಖರೇನs ಅದ.

ವಸಂತ:— ಬರೋದು ಬಂದಿ ಕೊಡಿಗಿಡಿಯಾದರೂ ತಕ್ಕೊಂಡು ಬರ ಬೇಕಾಗಿತ್ತು.

ಉಷಾ:— ಕೊಡಿ? ಹ:

ವಸಂತ:— ಯಾಕ, ಬಿಸಿಲು ತಾಕೋದಿಲ್ಲೇನು?

ಉಷಾ:— ತಾಕತದ, ಅಂತs ನೆರಳು ಹುಡುಕತ ಬಂದೆ. ಇಂಥಾ ಗೆಳತಿಯರ ಗುಂಪಿನಲ್ಲಿ ಒಂದು ದಿನ ಕಳಿಯೋದು ಕೂಡ ನನಗ ಕಠಿಣಾತ್ಯ, ವಸಂತ.

(ಒಮ್ಮೆಲೆ ಒಳಗಿನ ಬಾಗಿಲಕಡೆಗೆ ಹೋಗಹತ್ತುವಳು.
ವಸಂತ ಅವಳನ್ನು ಅಡ್ಡಗಟ್ಟುತ್ತ)

ವಸಂತ:— ಏನು, ಹೊರಟಿಲ್ಲಿ ನೀನು?

ಉಷಾ:— ಒಳಗ, ಅಕ್ಕನ ಕಡೆಗೆ.

ವಸಂತ:— ಅಂದರ, ಕಿಶೋರಿಯ ಕಡೆಗೆ?

ಉಷಾ:— ಹೌದು, ಅವರ ಕಡೆಗೇ ನನ್ನ ಕೆಲಸದ.

ವಸಂತ:— ನನಗ ಹೇಳಲ್ಲ, ಏನು ಕೆಲಸ ಅನ್ನೋದನ್ನ.

ಉಷಾ:— ನಿನಗ ಹೇಳೋಹಾಂಗಿದ್ದರ ಹೇಳ್ತಿದ್ದೆ. ಆದರ ಇಂದ ಅವರ್ನೂ ಭೆಟ್ಟಿಯಾಗೋದು ಅಂತ ಬಂದೀನಿ. ಅವರ ಹತ್ತರೂ ಕೆಲಸದ ನನ್ನದು. ನನ್ನ ಒಳಗ ಬಿಡು. (ಬಾಗಿಲದ ಹತ್ತಿರದವರೆಗೆ ಹೋಗುವಳು.)

ವಸಂತ:— ಇಲ್ಲ, ಆಕಿ ಮನೆಯೊಳಗಿಲ್ಲ. ನಿನ್ನೇ ತವರಮನೀಗೆ ಹೋಗ್ಯಾಳ.

ಉಷಾ:— (ನಿರಾಶಳಾಗಿ) ತವರಮನೀಗೆ ಹೋದರು? ಯಾವಾಗ ಬರ್ತಾರ?

ವಸಂತ:— ಅಂದರ? ಕಿಶೋರಿಗೇ ಹೇಳುವಂಥ ಕೆಲಸೇನವಾ ಅದು?

ಉಷಾ:— ಕೆಲಸ? ವಸಂತ, ನಿನಗ ಗೊತ್ತದ, ಎಷ್ಟು ದಿನ ಅಂತ ನಾ ನಿನ್ನಿಂದ ದೂರ ಇರಲಿ? ಇವತ್ತಿಂದಿವತ್ತೂ ಅವರ್ನ ಕಂಡು, ಅವರ ಅನುಮತಿ ಪಡೀಲಿಕ್ಕಂತೂ ಬಂದಿದ್ದೆ ನಾನು. ವಸಂತ, ಈ ಅನಿಶ್ಚಿತ ಜೀವನ ನನಗಂತೂ ಸಹಿಸೋದು ಇನ್ನ ಅಶಕ್ಯ ಅದ!

(ಕುರ್ಚಿಯ ಮೇಲೆ ಕುಳಿತು ಒಮ್ಮೆಲೇ ಅಳುವದಕ್ಕೆ
ಪ್ರಾರಂಭಿಸುವಳು.)

ವಸಂತ:— ಉಷಾ, ಮತ್ತ ನನಗಾದರೂ ಇದನ್ನ ಸಹಿಸೋದು ಶಕ್ಯದ ಏನು? ನಮ್ಮ ಲಗ್ನದ ವಿಷಯದಲ್ಲಿ ಏನಾದರೂ ಹಾದೀ ಹುಡುಕುವ ಆಲೋಚನೆಯಲ್ಲೇ ನಾನೂ ಇದ್ದೀನಿ. ಅಂತೂ ನೀನು ನಾಲ್ಕಾರು ದಿನ ಭೆಟ್ಟಿಯಾಗೋದು ಬ್ಯಾಡ ಅಂತ

ನಿನಗ ಹೇಳಿದ್ದೆನಲ್ಲ? ಮತ್ತ ಹಂಗಾರ ಯಾಕ ಬಂದಿ? ಯಾಕ ಹೀಂಗ ನನ್ನ ಪ್ರಾಣಾ ತಗೋತಿ, ಉಷಾ?

**ಉಷಾ:—** ನಾ ನಿನ್ನ ಪ್ರಾಣಾ ತಗೋತೀನೊ, ನೀ ನನ್ನ ಪ್ರಾಣಾ ತಗೋತಿಯೊ? ನಿನ್ನ ನೋಡದs, ಭೆಟ್ಟಿಯಾಗದs ನಾಲ್ಕಾರು ದಿನ ಇರಲಿ? ಅಶಕ್ಯದs ವಸಂತ. ಸುತ್ತಲಿನ ಸಮಾಜದಲ್ಲಿ ನಾ ಅಡ್ಡಾಡ್ತೀನಿ, ನವಕರಿ ಮಾಡ್ತೀನಿ, ಗೆಳತಿಯರ ಬಳಗದಲ್ಲಿ ತಿರಗಾಡ್ತೀನಿ. ಏನs ಮಾಡಿದರೂ ಅದು ಯಾಂತ್ರಿಕ, ಕೇವಲ ನಿರ್ಜೀವ! ಆದರ ಅದs ಕಾಲದಲ್ಲಿ ನಾನು ಬಾಳೋ ಜೀವನ ಇನ್ನೊಂದದ; ಅದು ನಿನ್ನ ಸಹವಾಸದಲ್ಲಿದ್ದಾಗಿನದು! ಅದರೊಳಗ ಖರೆ ಜೀವಂತನ ಅದ. ಅದು ಕಾಲ್ಪನಿಕವಾಗಿದ್ದರೂ ನನಗ ಅದೇ ನಿಜವಾದ ಜೀವನ ಅಂತ ಅನಿಸ್ತೇದ. ನಾಲ್ಕಾರು ದಿನ ಕಾಣಬ್ಯಾಡ ಅಂತ ನನಗ ಹೇಳಿದಿ. ನನ್ನ ಆ ಜೀವನದೊಳಗಿಂದ ನೀ ಯಾಕ ಹೊರಗ ಹೋಗಲಿಲ್ಲ?

**ವಸಂತ:—** ನೀ ಹೋಗಗೊಟ್ಟಿದ್ದರ ನಾ ಹೋಗತಿದ್ದೆ.

**ಉಷಾ:—** ನಾ ನಿನ್ನ ಕಾಣಬಾರದು ಅಂತ ನನಗ ನಿರ್ಬಂಧಹಾಕಿದಿ. ಆದರ ನಿನಗ ನೆನಪsರ ಅದಯೇನು, ವಸಂತ? ಮೊನ್ನೆ ಸಾಯಂಕಾಲ ನೀನು ನನ್ನ ಕಡೆಗೆ ಬಂದಿ. ಒಂದು ತಾಸು ಹೊತ್ತು ಏನೇನೋ ಮಾತಾಡಿದಿ, ಹೊರಟು ಹೋದಿ. ನೀನು ಏನು ಮಾತಾಡ್‌ತಿದ್ದಿ ಅಂಬೋದು ನಿನಗಾದರೂ ತಿಳೀತಿತ್ತೋ ಇಲ್ಲೋ ಯಾರು ಬಲ್ಲರು. ಮನೀಗೆ ತಿರುಗಿ ಹೋಗೋದು ಅಂತ ಹೊರಟಿ. ಮನಿಯನ್ನಾದರೂ ಸರೀಗೆ ಮುಟ್ಟತಿಯೋ ಇಲ್ಲೋ ಅಂತ ಅನಿಸಿತು ನನಗ! ವಸಂತ, ನನ್ನಿಂದ ಅಗಲಿ ಹೋಗೋವಾಗ ನಿನ್ನಲ್ಲಿಯೂ ಎಷ್ಟೊಂದು ನಿರ್ಜೀವತೆ ಬರ್‍ತದ ಅಂಬೋದು ನಿನಗ ಕಂಡsದೇನು?

**ವಸಂತ:—** ಮತ್ತ ಹಿಂಗ ನಿರ್ಜೀವನಾದ ನಾನು, ನನ್ನ ವ್ಯವಸಾಯದಲ್ಲಿ ಪರರ ಜೀವಾ ಬದಕಿಸೋ ನಾಟಕಾ ಮಾಡ್ತೀನಿ! ರೋಗದ ನಿದಾನವಾದರೂ ನನ್ನಿಂದ ಸರಿಯಾಗಿ ಆಗ್ತದೊ ಇಲ್ಲೋ

ಯಾರು ಬಲ್ಲರು! ರೋಗಿಯ ಹೆಸರಿನ ಬದಲಾಗಿ, ಅಷ್ಟೌ ಪ್ರಹರ ನನ್ನ ಕಿವಿಯಲ್ಲಿ ಝೇಂಕರಿಸುವ ನಿನ್ನ ಹೆಸರನ್ನೇ ನಾನೆಲ್ಲಿ ಬರೀತೇನೊ ಏನೊ! ಅವರ ಹೃದಯದ ಬದಲಾಗಿ ನನ್ನ ಹೃದಯದ ಬಡಿತವನ್ನೇ ನಾನು ಕೇಳ್ತಿನೊ ಏನೊ! ಈ ಶರೀರ ನನ್ನದಾಗಿರದೆ ಯಾವದೋ ಒಂದು ತಂತು ವಾದ್ಯವೇ ಆಗಿರುವದೋ ಏನೊ! ಏನು ಹೇಳಲಿ, ಉಷಾ! ತಪ್ಪಿ ಯಾರಾದರೂ ಅದಕ್ಕೆ ಸ್ಪರ್ಶಮಾಡಿದರೂ ಅದರೊಳ ಗಿಂದ ನಿನ್ನ ಹೆಸರಿನ ಝೇಂಕಾರವೇ ಹೊರಬೀಳುವಂತೆ ಭಾಸ ವಾಗುವದು! ಉಷಾ ನನ್ನ ಯಾಚನೆಗಳು ನಿನಗೆ ತಿಳಿಯ ಲಾರವು. ಯಾಕ ನನ್ನ ಜೀವನದಲ್ಲಿ ಬಂದಿ? ಅದೂ ನನ್ನ ಮದಿವ್ಯಾದಮ್ಯಾಲ, ಇಂಥ ಅಕಾಲಕ್ಕೆ!

ಉಷಾ:— ಅಕಾಲ! ಪ್ರೇಮದ ರಾಜ್ಯದಲ್ಲಿ ಅಕಾಲ ಎಂದಿಗೂ ಇರುವ ದಿಲ್ಲ, ವಸಂತ! ಎಲ್ಲ ಗಳಿಗೆಗಳೂ ಶುಭಗಳಿಗೆಗಳೇ, ಮಂಗಲ ವಾದವುಗಳೇ! ನನ್ನ ಜೀವನದಲ್ಲಿ ನೀನು ಮೊದಲ ಸಲ ಬಂದಿ, ಆ ಗಳಿಗೆಯನ್ನು ನಾನು ಮರೆತಿಲ್ಲ. ಮೈಯಲ್ಲಿ ತುಂಬ ಜ್ವರ ಏರಿತ್ತು. ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದೆ. ಆಗ ಡಾಕ್ಟರ್ ಎಂದು ನಿನ್ನನ್ನ ಕರೆತರಲಾಯಿತು. ನೀನು ಬಂದಿ, ಕೈಹಿಡಿದಿ, ನಾಡೀ ನೋಡಿದಿ, ಔಷಧ ಕೊಟ್ಟೆಯೋ ಇಲ್ಲವೋ ಯಾರು ಬಲ್ಲರು! ಮರುದಿನವೇ ನಾನು ನೆಟ್ಟಗಾದೆ. ಒಮ್ಮೆ ನೀನು ಕೇಳಿದಿ, ನನ್ನ ಹತ್ತಿರದವರು ಯಾರಾದರೂ ಇರುವರೇ ಅಂತ. ನನ್ನ ಕಣ್ಣಲ್ಲಿ ನೀರೂರಿತು. ಬಾಯಿವರೆಗೆ ಬಂದಿತ್ತು: ಅಂದು ಬಿಡಬೇಕು ನೀವಿದ್ದೀರಲ್ಲ ನನ್ನ ಜನ್ಮಾಂತರದ ಜತಿಗಾರರು ಅಂತ. ಆದರ ಅಷ್ಟಕ್ಕೇ ತಡೆದೆ. ನಿಜವಾಗಿ ಜನ್ಮಾಂತರದ ನಮ್ಮ ಸಂಬಂಧಗಳಿರು ವಂತೆಯೇ ನೀನು ನನ್ನನ್ನು ಉಪಚರಿಸಿದಿ. ಆರೈಕೆ ಮಾಡಿದಿ. ಅದೇ ಈಗ, ದುಃಖದಲ್ಲಿ ಕಮರಿಹೋದ ನನ್ನ ಜೀವನದ ಅಂಕುರ ನಿನ್ನ ಪ್ರೇಮದ ಜಲಧಾರೆಗೆ ಬೇರು ಹಿಡಿದಿರಲು,

ನನ್ನ ಜೀವನದಲ್ಲಿ ಯಾಕ ಬಂದಿ ಅಂತ ಕೇಳ್ತೀಯಲ್ಲ, ವಸಂತ!

**ವಸಂತ:—** ಏನು ಮಾಡಲಿ, ಉಷಾ? ಈ ಪ್ರಶ್ನಿ ನಾ ಕೇಳುವದಿಲ್ಲ, ನನ್ನ ದೈವ ನನ್ನಿಂದ ಕೇಳಿಸ್ತಾ ಅದ. ಪ್ರೇಮದ ಸರ್ವಸ್ವವನ್ನೇ ನಿನಗರ್ಪಿಸಿದ್ದರೂ ನಾನು ವಿವಾಹಿತ! ಕಿಶೋರಿಯ ವಿಚಾರ ....

**ಉಷಾ:—** ಪರರ ಬಗ್ಗೆ ವಿಚಾರಮಾಡಿ ನಮ್ಮ ಸುಖದುಃಖದ ಪ್ರಶ್ನ ಗಳೆಂದೂ ಪರಿಹಾರವಾಗುವದಿಲ್ಲ, ವಸಂತ! ಅವರು, ತಮ್ಮ ಸುಖದ ಪ್ರಶ್ನೆಯನ್ನು ಬಿಡಿಸಲು ತಾವು ಶಕ್ತರಾಗದಿದ್ದರೆ ನೀನದನ್ನ ಬಿಡಿಸುವದೆಲ್ಲಿಯ ತನಕ? ಯಾವ ರೀತಿಯಲ್ಲಿ?

**ವಸಂತ:—** ಅವಳ ವಿಷಯಕವಾದ ನನ್ನ ಕರ್ತವ್ಯವನ್ನು ಪಾಲಿಸಿ.

**ಉಷಾ:—** ಕರ್ತವ್ಯ ಪಾಲಿಸಿ ಗಂಡನಾದವ ಹೆಂಡತಿಯನ್ನ ಸುಖಿಯಾಗಿ ಮಾಡಬಹುದೆ, ವಸಂತ? ಹೆಂಗಸರು ಗಂಡನ ಪ್ರೇಮವನ್ನ ಅಪೇಕ್ಷಿಸ್ತಾರ; ಕರ್ತವ್ಯವನ್ನಲ್ಲ! ಇಂದಿನವರೆಗೆ ನೀನು ಆ ಕರ್ತವ್ಯವನ್ನ ಮಾಡ್ತಲೇ ಇರುವಿ. ಆಯಿತೇನು ಅವರಿಗೆ ಸುಖ? ಅದಕ್ಕಿಂತ ನಮ್ಮ ಮದಿವಿ ಆಯಿತು ಅಂದರ....

**ವಸಂತ:—** (ಕನಸಿನಲ್ಲಿದ್ದವನಂತೆ) ನಮ್ಮ.... ಮದಿವಿ.... ಆಯಿತು.. ..ಅಂದರ.

**ಉಷಾ:—** ಅಂದರ ಅವರು ಇದಕ್ಕೂ ಹೆಚ್ಚು ದುಃಖಿತರೇನು ಆಗಲಿಕ್ಕಿಲ್ಲ. ಅಂತೇ ಆ ಮಾತನ್ನ ಅವರಿಗೆ ಸ್ಪಷ್ಟವಾಗಿ ಕೇಳಬೇಕು ಅಂತ ಬಂದಿದ್ದೆ.

**ವಸಂತ:—** ನೀನು ಕೇಳುವದೇನಾಕೆಗೆ?

**ಉಷಾ:—** ಟ್ರಿಪ್ಪಿನಿಂದ ಬಂದ ಕ್ಷಣವೇ ನಿಶ್ಚಯಮಾಡಿದೆ, ಇನ್ನು ಮುಂದೆ ಈ ಅನಿಶ್ಚಿತ ಜೀವನವನ್ನ ಕ್ಷಣಕಾಲವೂ ಕಳೆಯುವ ಹಾಗಿಲ್ಲ ಅಂತ. ಹೋಗೋದವರಕಡೆಗೆ, ಪ್ರಸಂಗಬಿದ್ದರ ಅವರ ಪಾದದಮೇಲೆ ಹಣೆಯಿಟ್ಟು ಅನ್ನೋದವರಿಗೆ, ನಿಮ್ಮ ಮಾಲ್ಕಿಯ ಅಂತಃಕರಣದ ಒಂದು ಮೂಲೆಯಲ್ಲಿ ನನಗ

ಆಸರಾಕೊಡ್ರಿ, ಅಷ್ಟರಲ್ಲಿ ನಾನಿರ್ತೀನಿ. ಆದರ ಪ್ರಾಣದ ಹೊರ್‍ತು ಶರೀರಾ ಬದುಕಿಸೋ ಈ ಅಸಂಭವ ಕೃತ್ಯಮಾಡಲಿಕ್ಕೆ ಮಾತ್ರ ನನ್ನ ಹಚ್ಚಬೇಡಿರಿ.

ವಸಂತ :— ಉಷಾ, ಕಿಶೋರಿ ನಿನ್ನ ಬೇಡಿಕೆಗೆ ಒಪ್ಪಿಗೆಯನ್ನೂ ಕೊಡ ಬಹುದು. ಯಾವ ಬಗೆಯ ವಿರೋಧವನ್ನು ತೋರಿಸದೆಯೂ ಕೊಡಬಹುದು.

ಉಷಾ :— ಕೊಡಬಹುದಲ್ಲ? ನಡಿ ಹಾಗಾದರ ವಸಂತ, ಅವರಕಡೆಗೆ.

ವಸಂತ :— ಮತ್ತ....

ಉಷಾ :— ಇನ್ನೆಲ್ಲೀದೊ ಮತ್ತ? ಯಾರ ಸುಖದ್ದು ನಾವು ವಿಚಾರಮಾಡ ಬೇಕಾಗೇದ ಅವರಃ ಒಪ್ಪಿಗೀಕೊಟ್ಟಮ್ಯಾಲ ಇನ್ನೆಲ್ಲೀದು ಮತ್ತ?

ವಸಂತ :— ಆದರ ಯಾವ ಕಾಲದಲ್ಲಿ, ಯಾವ ಸಮಾಜದಲ್ಲಿ ನಾವು ವ್ಯವಹರಸ್ತೀವಿ ಅಂಬೋದು ನಿನಗ ಗೊತ್ತಿಲ್ಲೇನು, ಉಷಾ? ದ್ವಿಭಾರ್ಯಾಪ್ರತಿಬಂಧಕ ಕಾಯದೆ ಪಾಸ್‌ಮಾಡಿಕೊಳ್ಳುವ ವರೆಗೆ ಹೆಂಗಸರ ಮಜಲು ಹೋಗಿರುವಾಗ, ನಾವು ಮದಿವಿ ಮಾಡಿಕೊಳ್ಳೋದಾದರೂ ಹ್ಯಾಂಗ?

ಉಷಾ :— ಕಾನೂನಿನ ಭಾಷೆ ಮಾತನಾಡುವವರು ನಿಜವಾದ ಪ್ರೇಮದ ಯಾತನೆಗಳನ್ನ ಅನುಭವಿಸಿದ್ದಾರೇನು? ಹೋಗಲಿ—ಸಮಾಜ ದೂಷಣೆಮಾಡಿದರ ನನ್ನ ಮಾಡ್ತದ. ಆದರ ಈ ಸಮಾಜದ್ದು ನನಗೇನು ಸಂಬಂಧ? ನನಗೇನಾದರೂ ಅನಿಸ್ತಿದ್ದರ ಅದೊಂದು ಅಕ್ಕನ ಬಗ್ಗೆ.

ವಸಂತ :— ಹೌದಲ್ಲೊ? ನಾನು ಸಹ ಅವಳನ್ನೇ ಕೇಳಿ ಏನಾದರೂಮಾಡ ಬೇಕು ಅಂತಿದ್ದೆ. ಅಂತಃ ನಾಲ್ಕಾರುದಿನ ನನ್ನ ಕಾಣಬ್ಯಾಡ ಅಂತ ನಿನಗ ಹೇಳಿದ್ದೆ.

ಉಷಾ :— ಸಾಕು, ಸಾಕು, ನಿನ್ನೆ ಒಂದು ದಿವಸ ಕಳಿದೆ, ಅದೇ ಸಾಕಾತ್ಯ; ಇನ್ನ ಹೆಚ್ಚುದಿನ ಕಳೆಯೋದಂತೂ ನನಗ ಅಶಕ್ಯದ. ಈ ಶಿಕ್ಷಾ ಇನ್ನ ನನಗ ಹೇಳಬ್ಯಾಡ ವಸಂತ. ಇವತ್ತಿಂದಿವತ್ತೇ ನಾನು

ಅವರ ಒಪ್ಪಿಗಿ ಪಡೆಯೋ ಆಕಿ—ನಡಿ, ನಡಿ, ನಡಿಯಲ್ಲೊ (ಹಿಂತಿರುಗಿ) ಯಾಕೊ ವಸಂತ, ಬಾ ಅಲ್ಲ?

ವಸಂತ:— ನೀನು ತುಸು ಸ್ವಸ್ಥ ಕೂಡು ನೋಡೋಣು. (**ಉಷಾ ಕೂಡುತ್ತಾಳೆ.**) ಈಗ ಹೀಂಗಮಾಡೋಣ. ಇಬ್ಬರೂ ಚಹ-ಗಿಹ ತಕ್ಕೊಂಬೋಣು, ಆವ್ಯಾಲ ನೋಡೋಣಂತ ಆಕೀನ್ನ ಕಾಣೋದು ಬಿಡೋದು.

ಉಷಾ:— ಇಲ್ಲೆ ಚಹ? ಹಂಗಾರ ನಾ ಮಾಡಲಿ? ಮಾಡ್ತೇನಿ, ಹಾಂ? ಆವ್ಯಾಲ ಹೋಗೋಣಂತ ಇಬ್ಬರೂ.

(**ಅಷ್ಟರಲ್ಲಿ ಗಂಟಿ ಕೇಳಬರುತ್ತದೆ**)

ಉಷಾ:— ಯಾರಿದ್ದಾರೋ ಅವರ್ನ ಲಗೂ ಕಳಿಸು, ಹಂ. ಇಲ್ಲದಿದ್ದರ ವಿಜಿಟ್ಟಿನ ನೆವ ಹೇಳೀ.

(**ಪುನಃ ಗಂಟಿಯಾಗುತ್ತದೆ. ಉಷಾ ಒಳಗೆ ಹೋಗುತ್ತಾಳೆ. ಶ್ರೀಕಾಂತ ಬರುತ್ತಾನೆ**)

ಶ್ರೀಕಾಂತ:—ವಸಂತ, ನೀನು? ನಾನು ಹಿಂದೆ ನೋಡಿದ್ದಕ್ಕಿಂತ ಎಷ್ಟು ಬದಲಾಗೇದೋ ನಿನ್ನೊಳಗ? ಜಡ್ಡು ಗಿಡ್ಡು ಬಡಕೊಂಡಿತ್ತೋ ಏನ್ನಿನಗ?

ವಸಂತ:— ಜಡ್ಡಿನವನ್ಹಾಂಗ ಕಾಣಸ್ತೇನಿ ನಾನು? ಛೆ, ಇಲ್ಲ.

ಶ್ರೀಕಾಂತ:—ಕಾಣಸ್ತೀಯಂತೂ ಖರೆ, ಜಡ್ಡು ಬಡಕೊಂಡವರ್ಹಾಂಗ!

ವಸಂತ:— ಕಾಣಸ್ತಿರಬಹುದು. ಜಡ್ಡು ಬಡಕೊಂಡಿಲ್ಲ, ಗಾಳಿ ಬಡಕೊಂಡದ!

ಶ್ರೀಕಾಂತ:—ಹಿಂಗ? ನನಗ ಮಂತ್ರದ ವಿದ್ಯಾ ಚಲೊ ಬರ್ತದ, ವಸಂತ! ಬೇಕಾದಂಥಾ ಭಯಂಕರ ಭೂತಬಾಧಾ ಆಗಿರಲಿ, ನನ್ನ ದಾರಾ ಕಟ್ಟಿದರ ನಾಕು, ಮನುಷ್ಯ ಅದರಿಂದ ಮುಕ್ತಾಗ ಲಿಕ್ಕೇ ಬೇಕು.

ವಸಂತ:— ತನಗ ಬಾಧಾ ಆಗೋ ತನಕಾ ಪ್ರತಿಯೊಬ್ಬಂವ ತಾ ಮಾಂತ್ರಿಕಾಂತs ತಿಳಕೊಂಡಿರ್ತಾನ. ಕಾಲೇಜದ ಜಗತ್ತಿನಲ್ಲಿ ನಮ್ಮ ಸುತ್ತಲಿನ ಎಷ್ಟೋ ವಿದ್ಯಾರ್ಥಿಗಳಿಗೆ ಹೀಂಗs ಸನ್ನಿ ಬಡ

ಕೋತಿತ್ತು. ಆಗ ನಾನೂ ಸ್ವಂತಕ್ಕ ಮಾಂತ್ರಿಕಂತs ತಿಳಕೊಂಡಿದ್ದೆ.

ಶ್ರೀಕಾಂತ:—ಮತ್ತ ಆ ಪಿಶಾಚ್ಚವಸ್ತಿಯೊಳಗಿಂದ ಹೊರಬಿದ್ದು ಎಷ್ಟೋ ವರ್ಷಾದ ಮ್ಯಾಲ, ಈಗ ನಿನಗ ಆ ಬಾಧಾ ಆಗಬೇಕು ಅಂದರ? ದೈವಯೋಗ! ಬ್ಯಾರೆ ಏನನ್ನೋದದ! ನಿನ್ನ ನೋಡಿದರ ಕೆಟ್ಟ ಅನಿಸ್ತದ, ವಸಂತ. ಆದರ, ಬೇಕು ಅಂದರ ನಾನು ಧಾರಾ ಕಟ್ಟತೀನಿ! ನನ್ನ ಹತ್ತರ, ಇಂಥಾ ಬಾಧಾ ಆದರ, ಬೇಕಾದಷ್ಟು ಧಾರ ಅವ!

ವಸಂತ:— ದಾರ ಇಲ್ಲ, ಭ್ರಮು ಅದ ಭ್ರಮು! ನಿನಗಿನ್ನೂ ಆ ಬಾಧಾ ಆಗಿಲ್ಲ, ಅಂತ ಈ ಭಾಷಾ. ಎಳೆಯ ವಯಸ್ಸಿನ ಜಡ್ಡು ಲಗೂ ಗುಣ ಹೊಂದೋಹಾಂಗ, ಕಾಲೇಜಜೀವನದೊಳಗಿನ ಈ ಪಿಶಾಚಿಗಳೂ ಲಗೂ ಬಿಟ್ಟ ಗೋತಾವ; ಆದರ ಮೂವತ್ತೈದರ ಮುರಿವಿನೊಳಗ ಈ ಬಾಧಿ ಬಡಕೊಂಡಿತು ಅಂದರ, ಅದರ ದವಡೆಯೊಳಗಿಂದ ಮನುಷ್ಯ ಜೀವದರಸಿಲೆ ಪಾರಾಗಿ ಉಳಿ ಯೋದs ಅಶಕ್ಯ ಅದ! ಶ್ರೀಕಾಂತ, ನಿನ್ನೆಯಿಂದ ನೀನು ಇಲ್ಲೇ ಇದ್ದೀ. ಗೊತ್ತಾಗಿರಲೇಬೇಕು ನಿನಗೆಲ್ಲಾ.

ಶ್ರೀಕಾಂತ:—ಆಗೇ ಅದ. ಆದರ ನಿನಗ ಮಾತ್ರ ಇನ್ನೂ ಪೂರಾ ಗೊತ್ತಾ ದಂತೆ ಅನಿಸಪೊಲ್ಲದು, ಅಥವಾ ಗೊತ್ತಿದ್ದರೂ ನೀ ಮರೆತಿರ ಬೇಕು. ನೀನು ಎರಡನೇ ಲಗ್ನದ ವಿಚಾರಮಾಡ್ತೀಯಲ್ಲ? ನಿನ್ನ ವೈಯಕ್ತಿಕ ಜವಾಬ್ದಾರಿಯನ್ನ ನೀನು ಮರೆತು ಬಿಟ್ಟಂತೆ ಕಾಣಸ್ತದ. ಆ ಹುಡುಗಿಯ ಮೇಲಾದರೂ ಸಾಮಾಜಿಕ ಜವಾಬ್ದಾರಿ ಇದ್ದೇ ಅದ.

ವಸಂತ:— ಆಕಿಯ ಮ್ಯಾಲ ಸಾಮಾಜಿಕ ಜವಾಬ್ದಾರಿ? ಆ ಹುಡುಗಿಯ ಜೀವನದ ಕಲ್ಪನಾ ನಿನಗಿಲ್ಲ ಶ್ರೀಕಾಂತ. ಎಂಥ ನಿಷ್ಪ್ರೇಮ, ರುಕ್ಷ, ಏಕಾಕಿಜೀವನ ಅವಳ ಪಾಲಿಗೆ ಬಂದsದ ಅಂತೀ? ದೈವೀ ಕೋಪದಿಂದಲ್ಲ, ಕೇವಲ ನಮ್ಮಲ್ಲಿಯ ಸಾಮಾಜಿಕ ಅನ್ಯಾಯsದ ಮೂಲಕ, ಸಮಾಜದಿಂದ ಸಿಡಿದು ಅವಳಿಗೆ

ದೂರ ಇರಬೇಕಾಗೇದ ಅಂದಮ್ಯಾಲ, ಸಮಾಜದ ಬಗ್ಗೆ ಅವಳಿಗೆ ಯಾಕ ಗೌರವ ಅನಿಸಬೇಕು ನೀನೇ ಹೇಳು. ಇಂಥ ಮಮತೆಯು ಜೀವಕ್ಕ ಎಂಥ ಕಷ್ಟಮಯ ಸ್ಥಿತಿಯಲ್ಲಿ ಕಾಲ ಕಳೆಯೋ ಪ್ರಸಂಗ! ಶ್ರೀಕಾಂತ, ಅವಳ ಸಹವಾಸದ ಯೋಗ ನಿನಗ ಬಂದಿಲ್ಲ; ಬಂದಿದ್ದರ ನನಗಿಂತ ನಿನಗS ಹೆಚ್ಚಾಗಿ ಅವಳ ಸನ್ನಿ ಬಡಕೋತಿತ್ತು.

**ಶ್ರೀಕಾಂತ:**—ನನಗ ಬಡಕೋತಿತ್ತು! ಹಾಂಗ ಬಡಕೊಂಡಿದ್ದರೂ ನನ್ನ ವಿಷಯ ಕಷ್ಟದ್ದಿರಲಿಲ್ಲ. ಯಾಕಂದರ ನಾನು ಅವಿವಾಹಿತ. ಆದರ ನೀನು....

**ವಸಂತ:**— ಅಲ್ಲೊ, ಮನುಷ್ಯ ಹೀಂಗ ಹುಚ್ಚಾಗತಾನ, ಅದೇನು ಅಂವಗ ಇಷ್ಟ-ಅನಿಷ್ಟ ತಿಳಿಯೋದಿಲ್ಲ ಅಂತ ಅಗ್ತಾನ ?

**ಶ್ರೀಕಾಂತ:**—ವಸಂತ....

**ವಸಂತ:**— ಈ ಮಾತೆಲ್ಲ ಯಾಕ, ಶ್ರೀಕಾಂತ? ನಾನಂತೂ ನನ್ನ ನಿಶ್ಚಯ ದಿಂದ ಪರಾವೃತ್ತನಾಗೋದು ಶಕ್ಯS ಇಲ್ಲ.

**ಶ್ರೀಕಾಂತ:**—ಹೌದೊ, ನಿನ್ನ ನಿಶ್ಚಯದಿಂದ ನಿನ್ನನ್ನ ಪರಾವೃತ್ತಗೊಳಿಸಲಿಕ್ಕೆ ನಾ ಬಂದೀನಿ ಅಂತ ನಿನಗ ಹೇಳಿದರ್ಯಾರು ?

**ವಸಂತ:**— ಹೇಳಲಿಕ್ಕೆ ಯಾಕ ಬೇಕು? ಕಿಶೋರಿ ನಿನ್ನ ತಂಗಿ, ಅಂದ ಮ್ಯಾಲ ನಾ ಎರಡನೇ ಮದಿವೀ ಮಾಡಿಕೊಂಡರ ಆಕೀಗೆ ದುಃಖ....

**ಶ್ರೀಕಾಂತ:**—ಆದೀತಂತ ಇಲ್ಲ, ಹಂ ಮತ್ತ! ನಿನ್ನೆಯಿಂದ ನಾ ನೋಡ್ತೀನಿ, ಭಲೊ ಚೈನಿಯೊಳಗ ಇದ್ದಾಳ ಆಕಿ! ಉಣ್ತಾಳ, ತಿಂತಾಳ, ನಗತಾಳ, ಕೆಲೀತಾಳ. ನಿನ್ನೆ ರಾತ್ರಿಯಂತೂ ನಾವೆಲ್ಲರೂ ಕೂಡಿ ಹೀಂಗ ಜಲಸಾ ಮಾಡಿದಿವಿ, ಹಾಟೆಲಕ್ಕ ಹೋದಿವಿ, ಸಿನೇಮಾಕ್ಕ ಹೋದಿವಿ, ಮಜಾನೇ ಮಜಾ! ನನಗಂತೂ ಆಕಿ ಎಳ್ಳಷ್ಟೂ ದುಃಖಿತಳಾಗಿ ಕಾಣಲಿಲ್ಲ!

**ವಸಂತ:**— (ನೊಂದುಕೊಂಡವನಾಗಿ) ಹೆಂಗಸರ ಅಭಿಮಾನ ಅದು! ತಮ್ಮ ದುಃಖ ಮುಂದಿಗೆ ತಿಳಿವದ್ದು ಅವರಿಗೆ ಸೇರೋದಿಲ್ಲ.

ಶ್ರೀಕಾಂತ:—ಏನಾದರೂ ನಮ್ಮ ಅಕ್ಕು ಮೊದಲಿನಿಂದಲೇ ವಿವೇಕಿ. ಮನಸ್ಸಿಗೆ ಹಚ್ಚಿಕೊಂಡು ಕೊರಗುವವಳಲ್ಲ. ಆಕಿ ಹೀಂಗ ವಿಚಾರಮಾಡಬಹುದು, ಕೆಲವು ಹೆಂಗಸರ ಗಂಡಂದಿರು ಸಾಯುವದಿಲ್ಲೇನು? ಅದರ ಪೈಕಿ ತಾನೂ ಒಬ್ಬಳು! ತನ್ನ ಗಂಡನೂ ಸತ್ತಿರುವನೆಂತಲೇ ಭಾವಿಸಿದರಾತ್ಯು!

ವಸಂತ:— ಏನು ಶಹಣ್ಯಾ ಇದ್ದಿಯೋ! ಸಾಯುವ ಮಾತು ಇದಕ್ಕ ಸಂಬಂಧಾಗಲಾರದು. ಸಾಯೋದು ಯಾರ ಕೈಯೊಳಗಿನ ಮಾತೇನು?

ಶ್ರೀಕಾಂತ:—ಇದಾದರೂ ಅವಳ ಕೈಯೊಳಗಿನ ಮಾತದ ಏನು?

ವಸಂತ:— ಅವಳ ಕೈಯೊಳಗೂ ಇಲ್ಲ, ಮತ್ತ ನನ್ನ ಕೈಯೊಳಗೂ. ಈಗ ಆ ಮಾತು ಉಳಿದಿಲ್ಲ. ಹಾಂಗಿರದಿದ್ದರ ಖಂಡಿತ ಅವಳ ದುಃಖಕ್ಕ ನಾ ಕಾರಣಾಗತಿರಲಿಲ್ಲ.

ಶ್ರೀಕಾಂತ:—ಅಲ್ಲೊ, ಗಂಡ ಎರಡನೇ ಮದಿವಿ ಮಾಡಿಕೊಂಡ ಅಂದರ ಮೊದಲನೇ ಹೆಂಡತಿ ನಿಶ್ಚಯವಾಗಿ ದುಃಖಕ್ಕೊಳಗಾಗ್ತಾಳ ಹೀಂಗೇನೂ ಇಲ್ಲಾ ಮತ್ತ! ಗಂಡ ಎರಡನೇ ಮದಿವಿ ಮಾಡಿಕೊಂಡದ್ದು ಕೇಳಿ, 'ಈ ರಾಕ್ಷಸನ ಕೈಯೊಳಗಿಂದ ಬದುಕಿದೆ' ಅಂತ ಮೊದಲನೇ ಹೆಂಡತಿ ಸಮಾಧಾನದ ಉಸಿರ್ಗರೆದ ಉದಾಹರಣೆಗಳೂ ಬೇಕಾದಷ್ಟವ. ಮತ್ತ ನಮ್ಮ ಅಕ್ಕೂನು ಕೂಡ ನಿನ್ನ ಎರಡನೇ ಮದಿವಿ ಆದದ್ದು ಕೇಳಿ, ನಾ ಖಾತ್ರಿಯಿಂದ ಹೇಳಬಹುದು, ಆನಂದ ಆದರೂ ಆಗುವ ಸಂಭವ ಅದನs, ಮತ್ತ.

ವಸಂತ:— ನೀ ಏನs ಅನ್ನು ಶ್ರೀಕಾಂತ, ನಾ ಮಾತ್ರ ಇಂದಿನವರೆಗೆ ಅವಳನ್ನ ಸುಖದಲ್ಲಿಡೋ ಪ್ರಯತ್ನಮಾಡದೆ ಇಲ್ಲ.

ಶ್ರೀಕಾಂತ:—ಮತ್ತ ನಿನಗದರಲ್ಲಿ ಯಶಸ್ಸೂ ಸಿಕ್ಕಿದ್ದೀತು, ಆದರ, ಇನ್ನ ಮುಂದ ಆಕಿ ದುಃಖಿತಳಾಗ್ತಾಳ ಅಂತ ನೀನು ತಿಳಕೊಂಡಿದ್ದರ ಮಾತ್ರ ಅದು ತಪ್ಪು. ಸುಖಾ ಕೊಡಲಿಕ್ಕೆ ಬೇಕಾಗೋ ಸಾಮರ್ಥ್ಯಕ್ಕಿಂತ ದುಃಖ ಕೊಡಲಿಕ್ಕೆ ಹೆಚ್ಚಿನ ಸಾಮರ್ಥ್ಯ

ಬೇಕಾಗ್ತದ, ವಸಂತ! ಯಾವ ಸಹವಾಸದ ಆನಂದ ಅಂತಃಕರಣದ ಆಳವನ್ನು ಮುಟ್ಟಿಲ್ಲ, ಆ ಸಹವಾಸ ಆಕ್ಷಣಕ್ಕ ಸುಖ ಉಂಟುಮಾಡಿದರೂ, ಆ ಸುಖ ಇಲ್ಲದಂತಾದ ಮ್ಯಾಲ ದುಃಖನೇ ಆದೀತಂಬೊ ನಂಬಿಗಿಲ್ಲ. ಹೋಗಲಿ ಬಿಡು. ಅಕ್ಕ್ಯಾನ ಸುಖ-ದುಃಖದ ಆಳದಕ್ಕಿ ಹಾಡಿಕೊಳ್ಳಿಕ್ಕೆ ನಾ ಇಲ್ಲಿ ಬಂದಿಲ್ಲ. ನಾ ಇಲ್ಲಿ ಬಂದದ್ದು ಕೇವಲ ನಿನ್ನ ಮಿತ್ರ ಅಂತ, (ಕಾಲರ್ ಸರಿಮಾಡಿಕೊಳ್ಳುತ್ತ) ಸಮಾಜದ ಒಬ್ಬ ಪ್ರತಿಷ್ಠಿತ ಘಟಕ ಅಂತ, ಮೊದಲನೇ ಹೆಂಡತಿ ಬದುಕಿರುವಾಗ, ಎರಡನೇ ಮದಿವೀ ಮಾಡಿಕೊಳ್ಳಲಿಕ್ಕೆ ಹೊರಟ ಒಬ್ಬ ಮಿತ್ರನಿಗೆ, 'ಯಾತರ ಸಲುವಾಗಿ ನೀ ಇದನ್ನ ಮಾಡ್ತೀ?' ಅಂತ ಕೇಳುವ ಅಧಿಕಾರ ಖಾತ್ರಿಯಿಂದ ಅದ.

ವಸಂತ:— (ಹುಸಿಧೈರ್ಯ ತಾಳಿ) ಓಹೋ, ಕೇಳು. ಬೇಕಾಧಾಂಗ ಕೇಳು. ಆದರ ಮಿತ್ರನಿದ್ದರೂ ಕೆಲವು ಪ್ರಶ್ನಗಳನ್ನು ಕೇಳಲಿಕ್ಕೆ ಬರಲಾರದು ಅನ್ನೋದು ನಿನಗ ಗೊತ್ತಿರಲಿ. 'ಮದಿವಿ ಯಾಕ ಮಾಡಿಕೊಳ್ತೀ' ಅನ್ನುವದು ಅವನ ಕೇವಲ ಖಾಸಗೀ ಪ್ರಶ್ನಿ! ತೀರ ವೈಯಕ್ತಿಕವಾದದ್ದು!

ಶ್ರೀಕಾಂತ:— ಹೀಂಗs? ಮೊದಲನೆಯ ಮದಿವೀಹೊತ್ತಿನ ಎಲ್ಲ ನಿನ್ನ ಅಭಿಪ್ರಾಯಗಳೂ ಈಗ ಬದಲಾಧಾಂಗ ಕಾಣಸ್ತಾವ ವಸಂತ! ಆ ಕಾಲಕ್ಕ ಲಗ್ನ ಅಂದರ ಒಂದು ಸಾರ್ವಜನಿಕ ಬಾಬು ಅಂತ ಅನಿಸಿತು ನಿನಗ. ಆಗ ಅಭಿನಂದನದ ಸಂದೇಶಗಳೇನು, ಸಪ್ರೇಮ ಆಹೇರು— ಉಡುಗೊರೆಗಳೇನು, ಎಲ್ಲವನ್ನೂ ಸ್ವೀಕರಿಸಿದಿ; ಬ್ಯಾಂಡು, ಬಜಂತ್ರಿ ಹಚ್ಚಿ ಲಗ್ನ ಜಾಹೀರ ಮಾಡಿಸಿದಿ; ಸಾರ್ವಜನಿಕರನ್ನು ಆಮಂತ್ರಿಸಿ ಅವರಿಗೆ ಕಾಯಿ, ಸಕ್ಕರೆಯನ್ನು ಹಂಚಿದಿ! ಆಗ ಮಾತ್ರ ಇದು ಖಾಸಗಿ ಬಾಬು ಇರಲಿಲ್ಲ ಅನ್ನೋದು ಖಾತ್ರಿ ಇತ್ತು, ಅಂತ ಹೀಂಗ ಮಾಡಿದ್ಯೊ ನೀನು? ಯಾಕ ಹೀಂಗ ಸ್ವಂತಕ್ಕ ಮೋಸಮಾಡಿಕೊಳ್ತೀ, ವಸಂತ? ಇನ್ನ ಮದಿವಿಯ ಬದಲಾಗಿ, 'ಪ್ರೇಮ ಇದು

ನನ್ನ ಖಾಸಗೀ ಪ್ರಶ್ನಿ' ಅಂತ ನೀ ಅಂದರ ನಾ ಒಪ್ಪೇ ಬಿಟ್ಟೆ!

ವಸಂತ:— ಅಂದರ? ಪ್ರತ್ಯಕ್ಷ ನಿನ್ನ ತಂಗಿಯ ಜತಿಗೆ ಸಂಸಾರಮಾಡ್ತ, ಇನ್ನೊಬ್ಬಳ ಮ್ಯಾಲ ನಾನು ಪ್ರೇಮಮಾಡಿದರ ನಿನ್ನಡ್ಡಿಯಿಲ್ಲ ಅಂತಾತ್ಯ!

ಶ್ರೀಕಾಂತ:—ಬಿಲ್‌ಕೂಲ ಇಲ್ಲ! ಯಾಕಂದರ ಪ್ರೇಮ ಅನ್ನೋದು ಎಂದಿಗೂ ಒಂದು ವೈಯಕ್ತಿಕ ಭಾವನೆ. ಅದರ ವಿಷಯದಲ್ಲಿ ಒಬ್ಬರು ಇನ್ನೊಬ್ಬರಿಗೆ ಪ್ರಶ್ನೀ ಕೇಳೋದೇ ಮೂರ್ಖತನ. ಆದರ ನೀನು ಈ ವೈಯಕ್ತಿಕ ಭಾವನೆಗೆ ಕಾಯದೆಯ ಆಧಾರ, ಧರ್ಮದ ಮಾನ್ಯತೆ, ಸಮಾಜದ ಪ್ರತಿಷ್ಠೆಗಳನ್ನ ತಂದು ಕೊಡೋದಕ್ಕಾಗಿ ಲಗ್ನದ ಈ ಸೋಗು ನಿಲ್ಲಿಸಬೇಕಂತೀ. ಇವುಗಳಲ್ಲೊಂದೂ ಖಾಸಗೀ ಸ್ವರೂಪವಲ್ಲ ಅನ್ನೋದು ಸ್ಪಷ್ಟದಃ ಅಂದಮ್ಯಾಲ, ಕೇವಲ ನಿನ್ನ ಖಾಸಗೀ ಬಾಬು ಅಂತಿದ್ದ ಈ ಪ್ರಶ್ನೆಯಲ್ಲಿ ಇವುಗಳ ಅಗತ್ಯ ನಿನಗನಿಸೋ ಕಾರಣೇನು? ನೀನು ಅವಶ್ಯ ಪ್ರೇಮಮಾಡು, ಬೇಕಾಧಾಂಗ ಅನಿರ್ಬಂಧ ಪ್ರೇಮಮಾಡು. ಮತ್ತ ಖರೆ ಪ್ರೇಮವೀರ ನೀ ಆಗಿದ್ದರ ಧರ್ಮ, ಕಾಯದೆ, ಸಮಾಜ ಎಲ್ಲಾ ಕಿತ್ತೊಗೆದು, ನಿನ್ನ ಪ್ರೇಮದ ಸಹಚರೀ ಕೂಡ ಸುಖದಿಂದ ಸಂಸಾರ ಮಾಡು.

ವಸಂತ:— ಶ್ರೀಕಾಂತ, ಈ ರೀತಿ ನಿನ್ನ ತಂಗಿಯ ವಂಚನಾಮಾಡಿ....

ಶ್ರೀಕಾಂತ:—ವಂಚನಾ ಯಾಕ ಮಾಡ್ತೀ? ಆಕೀಗೆ ಹೇಳಿಕೇಳಿ ಮಾಡು. ಮತ್ತ ಈಗಂತೂ ಆಕೀಗೆ ಹೇಳೋದೂ ಅಗತ್ಯ ಇಲ್ಲ. ಗೊತ್ತದ ನಿನ್ನ ಪ್ರೇಮಪ್ರಕರಣ ಆಕೀಗೆ. ಮತ್ತ ನೀನು ಈ ಪ್ರೇಮದ ಪ್ರಶ್ನಿ ಖಾಸಗೀ ರೀತಿಯಿಂದ ಬಿಡಿಸ್ತಾ ಇದ್ದೀ, ಅಂತ ಆಕಿ ಸರಃಳ ತಿಳಿಕೋತಾಳ. ಆಕ್ಯಾದರೂ ತನ್ನ ಸ್ವಂತದ ಪ್ರಶ್ನಿ ....(**ತಡೆದು**) ಮಾಡಬಹುದು ಎಲ್ಲಾದರೂ ನವಕರಿ ಚಾಕರಿ ಅನ್ನು.

ವಸಂತ:— ಆದರ ನನ್ನ ಮ್ಯಾಲಿದ್ದ ಅವಳ ಆರ್ಥಿಕಹೊಣೆಯಿಂದ ತಪ್ಪಿಸಿ ಕೊಳ್ಳೋ ಮನಸ್ಸು ನನಗೆಷ್ಟೂ ಇಲ್ಲ.

ಶ್ರೀಕಾಂತ:—ಅಂದರಂತೂ ಬಹಳs ಒಳ್ಳೇದಾಯಿತು. ಹೊಟ್ಟೆಯ ಪ್ರಶ್ನಿ ನೀ ಬಗೆಹರಿಸಿದಿ. ಇನ್ನ ಎರಡನೆ ಪ್ರಶ್ನಿ ಅಂದರ ಅವಳ ತಾಯತನದ್ದು. ನಮ್ಮ ಅಕ್ಕು ಅದನ್ನು ಬಿಡಿಸ್ಯಾಳು, ಖಾಸಗೀ ರೀತಿಯಿಂದ! ಅದರಾಗೇನದ!

ವಸಂತ:— ಶ್ರೀಕಾಂತ, ಸ್ವಂತ ತಂಗಿಯ ಬಗ್ಗೆ ನೀನು ಈ ತರದ ಮಾತು ಬಳಸ್ತೀಯಲ್ಲ?

ಶ್ರೀಕಾಂತ:—ಸ್ವಂತ ತಂಗಿಯ ಬಗ್ಗೇ ಅಂತಲ್ಲ, ಗಂಡಬಿಟ್ಟ ಎಲ್ಲಾ ಹೆಂಗಸರ ಬಗ್ಗೇ! ಹೆಂಡತಿಯ ಪುತ್ರಪ್ರಾಪ್ತಿಯ ಖಾಸಗಿ ಕಲ್ಪನೆ ಕೂಡ ನಿಮಗ—ಗಂಡಸರಿಗೆ—ಸಹ್ಯ ಅನಿಸೋದಿಲ್ಲ! ಅದೇ ನೀವು ಮಾತ್ರ....

ವಸಂತ:— ಶ್ರೀಕಾಂತ ಮಿತ್ರತ್ವದ ಮೂಲಕ ದೊರೆತ ಸವಲತ್ತುಗಳ ದುರ್ಲಾಭ ಪಡೀತಾ ಇದ್ದೀ ನೀನು!

ಶ್ರೀಕಾಂತ:—ಒಪ್ಪಿದೆ. ಹಿಂದೂ ಲಗ್ನಪದ್ಧತಿಯ ಮೂಲಕ ದೊರೆಯುವ ಸವಲತ್ತಿನ ದುರ್ಲಾಭ ನೀ ಎಷ್ಟು ಪಡೀತಾ ಇದ್ದೀಯಲ್ಲ, ಅಷ್ಟು ಮಾತ್ರ ಅಲ್ಲ. ವಸಂತ, ಈ ನಿನ್ನ ಹೊಸ ಮದಿವಿಗೂ ನೀನು, ಬುಳುಸು ಹಿಡಿದ ನಮ್ಮ ಹಿಂದೂ ಲಗ್ನಪದ್ಧತಿಯ ಲಾಭ ಪಡೆಯಬಹುದಲ್ಲ? ಒಬ್ಬ ಸಾಕ್ಷಿದಾರ ಅಂದರ ಭಟ್ಟ, ಇನ್ನೊಬ್ಬ ಅಂದರ ಅಗ್ನಿ! ಭಟ್ಟನ ನಾಲಿಗಿ ಭಾರೀ ದಕ್ಷಿಣೀ ಕೊಟ್ಟು ಬಂದ್ ಮಾಡಲಿಕ್ಕೆ ಬರ್ತsದ. ಅಗ್ನಿಗಂತೂ ಒಂದಲ್ಲದ ಏಳು ನಾಲಿಗವ! ಆದರ ಒಂದು ನಾಲಿಗೆಯಿಂದಾದರೂ ಅಂವ ಎರಡನೇ ಮದಿವಿಯ ಬಗ್ಗೆ ಎಲ್ಲಾದರೂ ತಕರಾರು ಮಾಡಿದ್ದು ಕಿವಿಗೆ ಬಿದ್ದsದೇನು? ಎಲ ಹೌದಲ್ಲs, ಅವನೂ ಇಬ್ಬರ ಹೆಂಡರ ಗಂಡ! ನಿಮ್ಮಂಥವರಿಗೆ ತಕ್ಕ ಸಾಕ್ಷೀದಾರ!

ವಸಂತ:— **(ಈ ಮಾತಿನ ರಭಸಕ್ಕೆ ಹತಪ್ರಭನಾಗಿ, ಏನಾದರೂ ಮಾತು ಮುಂದರಿಸಬೇಕು ಎನ್ನುವ ಪ್ರಯತ್ನದಲ್ಲಿ)** ಇಲ್ಲ, ಶ್ರೀಕಾಂತ, ಇದು ನೋಡು....

ಶ್ರೀಕಾಂತ:—(ಅದನ್ನು ಊಹಿಸಿ) ಹೂಂ, ಹೋಗಲಿ ಬಿಡು, ವಸಂತ. ಯುಕ್ತಿವಾದ ಹೂಡಿ ನಿನ್ನನ್ನ ನಿರುತ್ತರಗೊಳಿಸಬೇಕು ಅಂತ ನಾ ಇಲ್ಲಿಗೆ ಬಂದಿಲ್ಲ. ನಿನ್ನ ಕಾರಣಗಳನ್ನ ತಿಳಕೊಳ್ಳೋದಕ್ಕಾಗಿ ಬಂದೆ. ಹಿಗ್ಗಿನಹಾದಿಯನ್ನ ಹುಡಕ್ತಾ ಹೊರಟಿರುವಾಗ, ಭಾವನೆಯ ಎಳೆತಕ್ಕ ಸಿಕ್ಕಿ ಬಾವಿಯಲ್ಲಿ ಬೀಳುವ ಸಂಭವ ಇದ್ದರ, ನಿನ್ನನ್ನ ಎಚ್ಚರಿಸುವದಕ್ಕಾಗಿ ಅಂತ ಬಂದೆ.

ವಸಂತ:— (ಆವೇಶದಿಂದ) ಹುರುಡುತನದಿಂದ ಒಮ್ಮೆ ಬಾವಿಯಲ್ಲಿ ಬಿದ್ದೆ. ಮತ್ತೊಮ್ಮೆ ಬೀಳುವದು ಎಂದೂ ಸಾಧ್ಯವಿಲ್ಲ, ಶ್ರೀಕಾಂತ.

ಶ್ರೀಕಾಂತ:—ಹೀಂಗು? ಯಾಕ? ಇದು ಪ್ರೀತಿವಿವಾಹ ಅಂತೇನು?

ವಸಂತ:— ನಿಸ್ಸಂಶಯುವಾಗಿ!

ಶ್ರೀಕಾಂತ:—ಏನು ಭ್ರಮೆಯುವಾ! ಅಲ್ಲೊ, ಪ್ರೀತಿವಿವಾಹದ ಲೆತ್ತ ಕೈಯಲ್ಲಿ ಹಿಡಿದವ್ಯಾಲ, ಬಯಸಿದ ಸುಖದ ಫಾಸಿ ಬೇಕಾಧಾಂಗ ಬೀಳ್ತಾವ ಅಂತ ನಿನ್ನ ಕೋಷ್ಟಕ ಅದ ಏನು?

ವಸಂತ:— ಅದ! ಸಾಕ್ಷಾತ್ ನನ್ನ ಭಾವನೆಗಳೇ ನನಗೆ ಕೋಷ್ಟಕ! ಬೇರೆ ಕೋಷ್ಟಕ ಬೇಕಾಗಿಲ್ಲ ನನಗ.

ಶ್ರೀಕಾಂತ:—ಭಾವೀ ಸುಖದ ಬಗ್ಗೆ ನಿನಗ ವಿಶ್ವಾಸ ಬಹಳ ಕಾಣಸ್ತದಪಾ! ಎಲ್ಲ ಜೂಜಾಟಗಳದೂ ಇದು ವೈಶಿಷ್ಟ್ಯ ಅದ ನೋಡು. ತಿಕೀಟು ತಕ್ಕೊಳ್ಳುವಾಗ ವಿಶ್ವಾಸ ಇಸಿಸ್ತದ, ಬಕ್ಷೀಸು ತಾವು ಖಾತ್ರಿಲೆ ಗೆಲ್ಲುವರು ಅಂತ. ಆದರ ವಸಂತ, ಲಗ್ನದಂಥ ಜೂಜಾಟ ಪ್ರಪಂಚದಾಗ ಇನ್ನೊಂದಿಲ್ಲ! ಮತ್ತ ಅದರಲ್ಲೆ ಪ್ರೀತಿವಿವಾಹ ಅಂದರಂತೂ ಸರ್ವಸ್ವವನ್ನೇ ಪಣಕ್ಕೆ ಹಚ್ಚಿದ ಲೆತ್ತ! ಬೇಡಿದ ಫಾಸಿ ಬಿತ್ತು, ನೀ ಗೆದ್ದಿ; ಅದು ಬೀಳಲಿಲ್ಲ, ನೀ ಬಿದ್ದಿ! ಪ್ರೀತಿವಿವಾಹದೊಳಗ ಪರಸ್ಪರರ ಹೊಂದಿಕಿ ಅಂಬೋ ಮಾತs ಇಲ್ಲ, ಅಂತುಹೇಳ್ತಿನಿ, ಆಲೋಚನಿಮಾಡಿ ಲೆತ್ತ ಒಗಿ. ಒಂದು ಮದಿವಿಯ ಜೂಜಿನಲ್ಲಂತೂ ಸೋತs ಇದ್ದೀ ನೀನು!

ವಸಂತ:— ಶ್ರೀಕಾಂತ, ನಾ ಬಲ್ಲೆ ಅದನ್ನ. ಮನುಷ್ಯ ಮದಿವೀಜೂಜು ಕಟ್ಟೋದು ದೈವದ ಜತಿಗೆ ಕಟ್ಟತಾನ. ಗೆದ್ದರ ಸುಖ, ಸೋತರ ದುಃಖ! ಆದರ ಪ್ರೇಮದ ಜೂಜಾಡೋದು ಮಾತ್ರ ಮನುಷ್ಯ ತನ್ನ ಪ್ರಾಣದ ಜತಿಗೇ ಆಡ್ತಾನ. ಗೆದ್ದ ಅಂದರ ಬದುಕಿದ, ಸೋತ ಅಂದರ ಸಂಪೂರ್ಣ ಸತ್ತ!

ಶ್ರೀಕಾಂತ:—ಹೌದು! ಆದರ, ನಿನ್ನ ಪ್ರಶ್ನಿ ಬರಿ ಪ್ರೇಮದ್ದೇ ಅಲ್ಲ, ಲಗ್ನದ್ದ ದ. ಪ್ರೇಮದಲ್ಲಿ ಒಂದು ನ್ಯಾಯ್ಯಾ ನೀ ಗೆದ್ದಿದ್ದರೂ, ಲಗ್ನದಲ್ಲಿ ಸೋಲೋದು ಖಂಡಿತ.

ವಸಂತ:— ಈ ಮಾತಿನ ವಿಚಾರ ನಾವು ಮಾಡಿಲ್ಲ ಅಂತ ನೀನು ಭಾವಿಸಿ ಕೊಂಡೀ ಏನು? ನಾವು ಸೋಲುವದು ಅಸಂಭವ, ಶ್ರೀಕಾಂತ.

ಶ್ರೀಕಾಂತ:—ನಿನ್ನ ಮುಟ್ಟಿಗಿರಬಹುದು— ಗಂಡಸರದೇನು? ಒಂದು ಆಟ ದಾಗ ಸೋತರು, ಇನ್ನೊಂದಾಟ—ಆದರ ಹೆಂಗಸರ ವಿಷಯ ಹಾಂಗಲ್ಲ. ಲಗ್ನದ ಘಟನೆ ಅಂದರ ಅವರ ಸರ್ವಸ್ವದ ಹೋಮ. ಅದರಲ್ಲಂತೂ ಆಕಿ ಪಾಪ ಅನನುಭವಿಕಳು, ನಿನ್ಹಾಂಗ ಮುರಿತವಳಲ್ಲ. ತಾನು ಹಾರಿಕೊಳ್ಳುವ ಅಗ್ನಿ ಕುಂಡದ ಕಲ್ಪನೆಯೂ ಆವಳಿಗೆ ಇರಲಿಕ್ಕಿಲ್ಲ.

ವಸಂತ:— (ನಕ್ಕು) ಶ್ರೀಕಾಂತ, ಈಗ ನಿನಗ, ನಿನ್ನ ತಂಗಿಯರೆಂತ ನನ್ನ ಭಾವೀ ಪತ್ನಿಯ ಬಗ್ಗೇ ಹೆಚ್ಚು ಕನಿಕರ ಉಂಟಾಗೇದಲ್ಲೊ!

ಶ್ರೀಕಾಂತ:—ನಾನೇನಪಾ, ಹೇಳಿಕೇಳಿ ವಿಶ್ವಕುಟುಂಬಿ. ಈಕಿ ಸದ್ಯ ತಂಗಿ, ಈಕಿ ಮಲತಂಗಿ, ಈಕಿ ಕಕ್ಕನ ಮಗಳು, ಈಕಿ ತಂಗಿಯೇ ಅಲ್ಲ! ಇಂಥ ಭೇದಭಾವ ನಾ ಎಂದೋ ಬಿಟ್ಟೇನಿ. ನನ್ನ ದೃಷ್ಟಿಯಲ್ಲಿ ನನ್ನ ತಂಗಿಯೂ ಅಷ್ಟೇ, ನಿನ್ನ ಪ್ರಣಯಿನಿಯೂ ಅಷ್ಟೇ. ಸ್ತ್ರೀ ಜಾತಿಯನ್ನ ಸ್ತ್ರೀ ಜಾತಿ ಅಂತ ನಾ ಕಾಣೋದಿಲ್ಲ. ಒಂದು ಈಶ್ವರೀಶಕ್ತಿ ಅಂತಲೇ ಕಾಣ್ತೇನಿ. ಜಗತ್ತಿನಲ್ಲಿ ನಿರ್ಮಿತಿ ಮತ್ತು ಸಂರಕ್ಷಣ— ಇವುಗಳೆರಡೂ ಈ ಶಕ್ತಿ ಮಾಡುವ ಕಾರ್ಯ. ಈ ಕಾರ್ಯ ಮರೆತು, ಸಂಹಾರದ ಅಥವಾ ಪರರ ಸಂಸಾರ ಹಾಳುಮಾಡುವ ಕೆಲಸದಲ್ಲಿ ಈ ಶಕ್ತಿ ತೊಡಗಿ

ದ್ದಾದರ, ಪ್ರಪಂಚದ ಪ್ರಗತಿಯ ಹಾದಿಯಲ್ಲಿ ಒಂದು ದೊಡ್ಡ ವಿಘ್ನವನ್ನೇ ಉಂಟುಮಾಡಿದಂತಾದೀತು. ವಸಂತ, ನಿನ್ನ ಹೆಂಡತಿಯ ಸಂಸಾರ ಹಾಳುಮಾಡುವದರಲ್ಲಿ ನಿನ್ನ ಪ್ರಣಯಿನಿಗೆ ಸಹಾಯಕನಾಗುವ ಸಂಕಲ್ಪ ಹ್ಯಾರೆ ನೀ ಮಾಡಿಲ್ಲಲ್ಲ?

ವಸಂತ:— ಛೆ, ನನ್ನ ಸಂಕಲ್ಪದ ಸಂಬಂಧವೇ ಇಲ್ಲ. ಸಂಕಲ್ಪ ಇದ್ದದ್ದು ಅವಳದು. ಮದಿವಿಗೆ ಅವಳನ್ನ ಹುರಿದುಂಬಿಸಿದ್ದು ನಾನು ಅಂತ ನಿನ್ನ ತಿಳಿವಳಿಕಿ ಆಗಿದ್ದರ, ಅದು ಸರಿಯಲ್ಲ ಶ್ರೀಕಾಂತ.

ಶ್ರೀಕಾಂತ:—ಹಂಗಾರ ಅವಳು ನಿನ್ನ ಹುರಿದುಂಬಿಸಿದಳೇನು? ಮತ್ತು ಅವಳ ಆಗ್ರಹಕ್ಕಾಗಿ ನೀನು ಮದಿವಿಗೆ ತಯಾರಾದ್ಯಾ? ಅಲ್ಲೊ, ಮದಿವೀ ಮಾಡಿಕೊಳ್ಳೋದು ಆದರ, ಸ್ವಂತದ ಪ್ರೇಮಕ್ಕಾದರೂ ಮಾಡಿಕೋ ಬೇಕು. ಆಕಿ ಮಾಡಿಕೊಳ್ಳೋದೇನೊ ಸರಿ, ಮತ್ತ ಮಾಡಿಕೊಳ್ಳಲಿಕ್ಕೂ ಆಕೆ ಸ್ವತಂತ್ರಳಿದ್ದಾಳ. ಆದರ, ನೀನು ಮೊದಲನೇ ಲಗ್ನದಲ್ಲಿ 'ನಾತಿ ಚರಾಮಿ' ಅಂತ ಅಗ್ನಿಸಾಕ್ಷಿಯಾಗಿ ಆಣೀ ಮಾಡೀಯಲ್ಲ?

ವಸಂತ — ಇದನ್ನ ನಾ ಆಕೀಗೆ ತಿಳಿಹೇಳಿಲ್ಲ, ಮತ್ತ ಇದರಿಂದ ಅವಳನ್ನ ಪರಾವೃತ್ತಗೊಳಿಸೋ ಪ್ರಯತ್ನ ಮಾಡಿಲ್ಲ.... ಅಂತ ನಿನ್ನ ತಿಳಿವಳಿಕೇನು?

ಶ್ರೀಕಾಂತ·—ಮಾಡಿರಬಹುದು. ಬರಿ ಶಾಬ್ದಿಕವಾಗಿ. ಕೃತಿಯಿಂದಲ್ಲ. ಇನ್ನೊಂದು ವ್ಯಕ್ತಿ ತಮ್ಮ ಮ್ಯಾಲ ನಿರತಿಶಯವಾಗಿ ಪ್ರೇಮ ಮಾಡುವಾಗ, ತಮ್ಮಲ್ಲಿಯ ಅಹಂಭಾವದ ಉರಿ ಹ್ಯಾಂಗ ಪ್ರಕಟಗೊಳ್ತದ ಅನ್ನುವದರ ಕಲ್ಪನಾ ನಿನಗಿಲ್ಲ, ವಸಂತ! ಈ ಅಹಂಭಾವದ ಉರಿಯನ್ನ ನೀನು ಬೆಳಸಿಕೊಂಡದ್ದು ಅವಳ ಮ್ಯಾಲಿನ ಪ್ರೇಮಕ್ಕಾಗಿ ಅಲ್ಲ; ಸ್ವಂತದ ಮ್ಯಾಲಿನ ಪ್ರೇಮಕ್ಕಾಗಿ. ಈಗ ಆ ಹೊಣೆಯನ್ನೆಲ್ಲ ಅವಳ ಮ್ಯಾಲ ಹೊರಸ್ತೀ. ಪಾಪ! ಪಾಪ!!

**(ಉಷಾ ಚಹಾದ ಟ್ರೆ ತಕ್ಕೊಂಡು ಬರುತ್ತಾಳೆ. ಬಾಗಿಲಲ್ಲಿಯೇ ನಿಲ್ಲುತ್ತಾಳೆ.)**

ವಸಂತ:— ಪಾಪ! ಅವಳ ಬಗ್ಗೆ ಕನಿಕರ! ಶ್ರೀಕಾಂತ, ಒರೆಯೊಳಗಿನ ಕಠಾರಿಗೆ ನೀನೆಂದಾದರೂ 'ಪಾಪ' ಅನ್ನುವಿಯಾ? ಪ್ರಚಂಡ ಮೇಘಗರ್ಜನೆಯನ್ನು ಹಿಮ್ಮೆಟ್ಟಿ, ನಿಮಿಷಮಾತ್ರದಲ್ಲಿ ಕಣ್ಣು ಕುಕ್ಕಿಸಿ ಮೋಹಗೊಳಿಸುವ ಮಿಂಚಿಗೆಂದಾದರೂ 'ಪಾಪ' ಅನ್ನುವಿಯಾ? ಈ ಸುಂಟರಗಾಳಿಯಲ್ಲಿ ಉಷೆಯಲ್ಲದೆ ಇನ್ನೊಬ್ಬ ಲತಾಂಗಿ ಯಾರಾದರೂ ಇದ್ದರೆ ಎಂದೋ ಕಮರಿ ಹೋಗಬಹುದಾಗಿತ್ತು! ಆದರ····ಉಷಾ····ಓ!

ಶ್ರೀಕಾಂತ:—(ನಿರಾಶನಾಗಿ) ನಿನಗ ಪೂರಾನಃ ಬಡಕೊಂಡದ ವಸಂತ! ಕಾಲೇಜ ಲೋಕದೊಳಗಿನ ಶಾಕಿನಿ–ಡಾಕಿನಿಯರು ಷೋಡಶ ವರ್ಷದ ಅಪ್ಸರೆಯರ ರೂಪತಾಳಿ ಎದುರಿಗೆ ಕುಣಿಯುವಾಗ, ನೀ ಕಣ್ಣೆತ್ತಿ ನೋಡಲಿಲ್ಲ! ಈ ನಿನ್ನ ಪ್ರಣಯಿನಿ ಆದಾಕಿ ಷೋಡಶವರ್ಷದ ಅಪ್ಸರೆಯಂತೂ ಇರುವ ಸಂಭವವೇ ಇಲ್ಲ; ಆದರೂ ಈ ಮಾನವರೂಪದ ಹೆಣ್ಣು ದೆವ್ವ ನಿನ್ನ ಪೂರಾನಃ ಹಿಡಿದುಬಿಟ್ಟೈದ! ನಾ ನೋಡಲೇ ಬೇಕು ಈ ಪಿಶಾಚಿನ್ನ!

(ಉಷಾ ಒಮ್ಮೆಲೆ ಮುಂದೆ ಬಂದು)

ಉಷಾ:— ಚಹಾ ತೋಗೋತೀರಲ್ಲ? (ಇಬ್ಬರೂ ಮೆಟ್ಟಿ ಬೀಳುವರು)

ವಸಂತ:— ಇವ ನನ್ನ ಮಿತ್ರ, ನಿನ್ನೇ ಊರಿಂದ ಬಂದಾನ.

ಉಷಾ:— ಕಾಲೇಜದಲ್ಲಿರುವಾಗಿನಿಂದಲೇ ನಿಮ್ಮ ನಿಮ್ಮ ಗೆಳೆತನ ಬಹಳ ಕಾಣಸ್ತದ. ಆ ಕಾಲದ ನಿಮ್ಮ ಶೌರ್ಯದ್ದು ತುಂಬ ಶಿಫಾರಸ್ಸು ನಡದಿತ್ತು! ಇವರಿಗೆ ಯಾವ ಶಾಕಿನಿ–ಡಾಕಿನಿ ಯರೂ ಬಡಕೊಂಡಿಲ್ಲೇನು ಇನ್ನೂ?

ವಸಂತ:— ಇನ್ನೂ ಅಂತೂ ಬಡಕೊಂಡಿಲ್ಲ; ಮತ್ತ ಇವರು ವಿಶ್ವಕುಟುಂಬಿ ಗಳಿದ್ದದ್ದರಿಂದ ಆ ಸಂಭವನೂ ಇಲ್ಲ. (ಪರಿಚಯಮಾಡಿಕೊಡುವ ಉದ್ದೇಶದಿಂದ) ಶ್ರೀಕಾಂತ, ನಿನಗ ಈಗ ಗೊತ್ತಾಗಿರಲೇ ಬೇಕು. ಇವರು ಉಷಾ····ಕೌಜಲಗಿ ಅಂತ!

ಉಷಾ:— ಒರೆಯೊಳಗಿಂದ ಹೊರಬಿದ್ದ ಕರಾರಿ!

ಶ್ರೀಕಾಂತ:—ನಮಸ್ತೆ. ಈಗ ನಿಮ್ಮ ವಿಷಯವಾಗಿಯೇ ಮಾತು ನಡೆದಿತ್ತು.

ಉಷಾ :— ಕೇಳಿದೆ. ಮತ್ತ ಇವರಿಗೆ ಪಿಶಾಚಬಾಧಾ ಬಡಕೊಂಡsದs ಅಂಬೋ ನಿಮ್ಮ ಅಭಿಪ್ರಾಯನೂ ಕೇಳಿದೆ.

ಶ್ರೀಕಾಂತ :—ಯಾವದೇ ವೈಯಕ್ತಿಕ, ಸಾಮಾಜಿಕ ಬಂಧನಗಳನ್ನು ಕಿತ್ತೊಗೆ ಯುವ ಮಟ್ಟಿಗೆ ಮನುಷ್ಯನ ಮಜಲು ಹೋಯಿತು, ಅಂದರ ಅಂಥ ಅಕ್ರಮ ನಡತಿಗೆ ಸನ್ನಿ ಅನ್ನೋದೇ ಸರಿ ಅಲ್ಲ? ಉಷಾ ತಾಯಿ, ನೀವಾದರೂ ಈ ಸಾಮಾಜಿಕಬಂಧನಗಳ ವಿಚಾರ ಮಾಡಲೇ ಬೇಕು.

ಉಷಾ :— ಸಾಮಾಜಿಕ ಬಂಧನಗಳ ವಿಚಾರ ನಾ ಮಾಡಲಿ? ಇಂದು ಅಸ್ತಿತ್ವದಲ್ಲಿಲ್ಲದ, ನಾಳೆ ಉಸಿರುಗಟ್ಟುವಂತೆ ಕೊರಳನ್ನು ಬಿಗಿಯುವ ಹಿಂದುಸ್ಥಾನದ ಈ ನಿಮ್ಮ ಲಹರೀ ಸಾಮಾಜಿಕ ಬಂಧನಗಳು !

ಶ್ರೀಕಾಂತ :—ಆದರೆ ನೀವು ಹಿಂದುಸ್ಥಾನದಲ್ಲಿಯೇ ಹುಟ್ಟಿ ಬೆಳೆದವರಲ್ಲ?

ಉಷಾ :— ಛೆ, ನಾನು ಯಾವ ಸಮಾಜದಲ್ಲಿ ಹುಟ್ಟಿ ಬೆಳೆದೆ, ಶಿಕ್ಷಣ ಹೊಂದಿದೆ, ಆ ಸಮಾಜಕ್ಕೆ ಇಂಥ ಬಂಧನಗಳನ್ನು ಪಾಲಿಸುವ ಅಗತ್ಯ ಅನಿಸಲಿಲ್ಲ.

ಶ್ರೀಕಾಂತ :—ಅಂದರ, ಬಂಧನಗಳಿಲ್ಲದ ಸಮಾಜದಲ್ಲಿ ನೀವು ಬೆಳೆದಿರೇನು?

ಉಷಾ :— ಬಂಧನಗಳಿಲ್ಲದ ಸಮಾಜ ನಾ ಕಾಣೆ. ನಾ ಯಾವ ಸಮಾಜ ದಲ್ಲಿ ಬೆಳೆದೆ ಆ ಸಮಾಜದಲ್ಲಿ ಬಂಧನಗಳೇನೋ ಅವ. ಆದರ ಇಲ್ಲೀಹಾಂಗ ಹೆಂಗಸರನ್ನ ಕಾಡುವ ದುಷ್ಟ ಪದ್ಧತಿ ಅಲ್ಲಿಲ್ಲ.

ಶ್ರೀಕಾಂತ :—ಹೆಂಗಸರನ್ನ ಕಾಡದೆ ಇರುವ ದೇಶ! (ಮೆಲ್ಲಗೆ ವಸಂತನಿಗೆ) ಯಾವದೋ ಅದು ದೇಶ, ವಸಂತ?

ಉಷಾ :— ಅವರ್ನ ಯಾಕ, ನನ್ನ ಕೇಳ್ತರೆಲ್ಲ? ಅದು ಬ್ರಹ್ಮದೇಶ.

ಶ್ರೀಕಾಂತ :—ಬ್ರಹ್ಮದೇಶ? ಹಿಂಗs? ಮತ್ತ—ಈ ಕಡೆಗೆ····

ಉಷಾ :— ಬಂದೆ, ನಿಮ್ಮ ಸ್ನೇಹಿತರಿಗ ಬಡಕೊಳ್ಳಲಿಕ್ಕೆ— ಜಪಾನದ ದಾಳಿಯನಂತರ.

ಶ್ರೀಕಾಂತ :—ಹಂ! ಆದರ ಕನಡ ಛಲೊ ಮಾತಾಡ್ತೀರಲ್ಲ!

ವಸಂತ :— ಅದsನೊ ಆಕಿಯ ಮಾತೃಭಾಷಾ.

ಶ್ರೀಕಾಂತ:—ಹೀಂಗ: ! ನಿಮ್ಮ ತಾಯಿ ತಂದಿ ಯಾರೂ ಜತಿಗೆ ಬಂದಿಲ್ಲ ಕಾಣಸ್ತದ. ಇವ ಅಂತಿದ್ದ—ನೀವು ಒಬ್ಬರೇ ಇದ್ದೀರಿ ಅಂತ. ತಾಯಿ ತಂದಿ ಅಲ್ಲೇ ಇದ್ದಾರೇನೊ!

ಉಷಾ :— ಇಲ್ಲ. ಈ ಲೋಕದಲ್ಲೇ ಇಲ್ಲ.

ಶ್ರೀಕಾಂತ:—ಅಯ್ಯೋ ಪಾಪ. ಕ್ಷಮಿಸಿರಿ ಹಾಂ. ನನಗ ಆ ವಿಷಯ ಗೊತ್ತಿರಲಿಲ್ಲ. ಇಲ್ಲಿಯೂ ಆಪ್ತರ್‍ಯಾರೂ ಇಲ್ಲೇನು?

ಉಷಾ :— ಯಾರಿಗ್ಗೊತ್ತು ?

ಶ್ರೀಕಾಂತ :—ವಿಚಾರಿಸೋಣಲ್ಲ.

ಉಷಾ :— ಈ ವಿಚಾರ ಬೇಕೇತಕ್ಕ? ನಮ್ಮ ತಾಯಿಯ ಆಪ್ತರು ಬ್ರಹ್ಮ ದೇಶದಲ್ಲಿದ್ದರು. ಅವರೆಲ್ಲರೂ ತೀರಿಕೊಂಡರು.

ಶ್ರೀಕಾಂತ:—ಅಂದರ ಬ್ರಹ್ಮದೇಶದಲ್ಲಿ ನೀವು ಅಜ್ಜನ ಮನೆಯಲ್ಲಿದ್ದಿ: . ಏನು ಅವರ ಅಡ್ಡಹೆಸರು? ನನ್ನ ಪರಿಚಯದ ಒಂದು ಮನೆತನ ಇತ್ತು ಬ್ರಹ್ಮದೇಶದಲ್ಲಿ— ಕೌಜಲಗಿ ಅಂತ.

ಉಷಾ :— ಅವರು ನಮ್ಮ ಸೋದರಮಾವ ಆಗ್ತಾರ.

ಶ್ರೀಕಾಂತ:—ಮತ್ತ ಅವರಿಗೆ ಒಬ್ಬ ತಂಗಿ ಇದ್ದರು— ಅವರು?

ಉಷಾ :— ಅವರೇ ನನ್ನ ತಾಯಿ.

ಶ್ರೀಕಾಂತ:—(ಆಶ್ಚರ್‍ಯಗೊಂಡು) ಏನು? ಆ ಶಾರದಾಬಾಯಿ ಜೋಶಿ ಅನ್ನು ವವರು— ನಿಮ್ಮ ತಾಯಿ? ಹಾಂಗಾದರ ನಿಮ್ಮ ಅಡ್ಡಹೆಸರು ಕೌಜಲಗಿ ಹ್ಯಾಂಗ?

ಉಷಾ :— ನಮ್ಮ ತಾಯಿ ನನಗ ಅದೇ ಹೆಸರು ಇರಲಿ ಅಂತ ಇರಿಸಿದರು ; ಜೋಶೀ ಅಂಬೂ ಹೆಸರು ಬ್ಯಾಡ ಅಂದರು.

ಶ್ರೀಕಾಂತ:—ಅದೇನು ಕಾರಣ?

ಉಷಾ :— ಗಂಡ ಬಿಟ್ಟಾಕಿ, ಗಂಡನ ಹೆಸರನ್ನಾದರೂ ಯಾಕ ಹಚ್ಚಬೇಕು? ನಮ್ಮ ತಾಯಿಯಂತೂ ಕುಂಕುಮ ಕೂಡ ಅಳಿಸಿಬಿಟ್ಟಿದ್ದಳು!

ಶ್ರೀಕಾಂತ:—ಆದರ ನೀವು ತಂದೀ ಹೆಸರು ಹಚ್ಚಲಿಕ್ಕೆ ಏನಾಕ್ಷೇಪಣೆ ಇತ್ತು? ತಾಯಿನ್ನ ಬಿಟ್ಟಿದ್ದರೂ ಮಕ್ಕಳಿಗೆ ತಂದೀಮ್ಯಾಲ ಪ್ರೀತಿ ಅನಿಸೋದು!

ಉಷಾ:— ನನಗ ಹ್ಯಾಂಗನಿಸಬೇಕು? ನಾನಂತೂ ಅವರ್ನ ಎಂದೂ ನೋಡಿಲ್ಲ, ಮತ್ತ ಅವರಿಗೆ ನನ್ನ ಅಸ್ತಿತ್ವ ಕೂಡ ಗೊತ್ತಿರಲಾರದು.

ಶ್ರೀಕಾಂತ:—(ಇನ್ನಷ್ಟು ಅಚ್ಚರಿಗೊಂಡು) ಎಲ, ಇದು ಹ್ಯಾಂಗೇನು? ನಿಮ್ಮ ಅಸ್ತಿತ್ವ ಅವರಿಗೆ ಗೊತ್ತಿರಲೇಬೇಕು.

ಉಷಾ:— ಅವರಿಗೆ ಗೊತ್ತಿರುವ ಸಂಭವವೇ ಇಲ್ಲ, ಅವರು ಎರಡನೆ ಮದಿವಿ ಮಾಡಿಕೊಂಡರು—ಅಂತ ನಮ್ಮ ತಾಯಿ ಸಿಟ್ಟಾಗಿ ಬ್ರಹ್ಮದೇಶಕ್ಕ ನಮ್ಮ ಸೋದರಮಾವನ ಕಡೆಗೆ ಹೋದರು; ಅನಂತರ ಅಲ್ಲೇ ಆರೇಳು ತಿಂಗಳದಲ್ಲೇ ನನ್ನ ಜನ್ಮ ಆತ್ಯು. ತಮಗೊಬ್ಬ ಮಗಳಿದ್ದಾಳ ಅಂಬೋದು ತಂದಿಯವರಿಗೆ ತಿಳಿಯದು. ಅವರಾದರೂ ಜೀವದಿಂದ ಇದ್ದಾರೋ ಇಲ್ಲವೋ ಯಾರು ಬಲ್ಲರು!

ಶ್ರೀಕಾಂತ:—ಇದ್ದಾರ.

ಉಷಾ:— (ಆಶ್ಚರ್ಯದಿಂದ) ಇದ್ದಾರ? ......ಎಲ್ಲಿ? ಹೋಗಲಿ. ನನಗ್ಯಾಕಬೇಕು ಅವರ ಉಸಾಬರಿ! ಯಾರು ನನ್ನ ತಾಯಿಯ ಜೀವನವನ್ನ ಹಾಳ್‌ಗೆಡವಿ ಮಣ್ಣುಪಾಲು ಮಾಡಿದರೊ, ಅವರ ಮುಖ ಕೂಡ ನೋಡುವ ಅಪೇಕ್ಷೆ ಇಲ್ಲ ನನಗ.

ಶ್ರೀಕಾಂತ:—ಎಲ, ಎಲ! ಉಷಾತಾಯಿ, ಯಾರು ನಿಮ್ಮ ತಾಯಿಯ ಜೀವನವನ್ನು ಮಣ್ಣುಗೂಡಿಸಿದರೊ, ಅವರ ಪ್ರತ್ಯಕ್ಷ ಮಗಳ ಸಂಸಾರವನ್ನೇ ನೀವು ಮಣ್ಣುಪಾಲು ಮಾಡ್ತಾ ಇದ್ದೀರಿ!

ಉಷಾ:— ಅಂದರ? ಏನು ಹೇಳ್ತಾ ಇದ್ದೀರಿದು? ವಸಂತನ ಮಾವ ನನ್ನ ತಂದಿ?

ವಸಂತ.— ಶ್ರೀಕಾಂತ, ಏನಿದು ನೀನು ಹೇಳ್ತ ಇರೋದು?

ಶ್ರೀಕಾಂತ:—ಹೌದು, ವಸಂತ! ಈ ವಿಧಿಘಟನೆ ನನ್ನನ್ನೂ ಬೆರಗುಮಾಡಿ ಬಿಟ್ಟೈದ!

(ಕೂಡಲೆ ತೆರೆ ಬೀಳುವದು.)

*

# ಅಂಕ ೩

[ಉಷೆಯ ಮನೆ. ಒಂದು ಮೂಲೆಯಲ್ಲಿ ರೇಡಿಯೊ. ಎರಡನೆ ಮೂಲೆಯಲ್ಲಿ ಪರದೆಯಾಚೆಗೆ ಉಷೆಯ ಮಂಚ. ಎಡ ಮಗ್ಗಲು ಗೋಡೆಗೆ ಒಂದು ಡ್ರೆಸಿಂಗ್ ಟೇಬಲ್, ಬಲಗಡೆಯ ಗೋಡೆಗೆ ಆನಿಸಿ ಇಟ್ಟಿರುವ ಸ್ಟ್ಯಾಂಡಿನ ಮೇಲೆ ಒಂದು ಬುದ್ಧನ ಮೂರ್ತಿ, ಉಳಿದ ಕುರ್ಚಿಗಳು, ಟೇಬಲ್, ಇತರ ಫರ್ನಿಚರು. ತೆರೆ ಮೇಲೆದ್ದಾಗ ರೇಡಿಯೋದಲ್ಲಿ ಒಂದು ಹಾಡು ಕೇಳಬರುವದು. ಉಷಾ ಹಾಗು ಚೈತನ್ಯ ಕೇಳುತ್ತ ಕುಳಿತಿದ್ದಾರೆ. ಹಾಡಿನಕಡೆಗೆ ಉಷೆಯ ಲಕ್ಷ್ಯವಿಲ್ಲ. ಆಕೆ ಒಮ್ಮೆಲೆ ಅನ್ನುತ್ತಾಳೆ.]

**ಉಷಾ :—** ಹಾಡು ಸಾಕು, ದೊಡ್ಡಪ್ಪ.

**ಚೈತನ್ಯ :—** (ಆಶ್ಚರ್ಯದಿಂದ) ಮಗಳೆ, ಎಂದೆ ಇವತ್ತು ಸಂಗೀತಂ ಕೇಳುವದಿಲ್ಲ?

**ಉಷಾ :—** ಇವತ್ತಂತೂ ನನಗ ಏನೂ ಬ್ಯಾಡಾಗೇದ, ದೊಡ್ಡಪ್ಪ.

**ಚೈತನ್ಯ :—** ಹಾಗಾದರೆ ನಾನು ನಿನಕ್ಕೆ ಇಷ್ಟಮುಳ್ಳ ರಿಕಾರ್ಡು ಕೇಳಿಸಲಿಯಾ?

(ಚೈತನ್ಯ ಒಂದು ರಿಕಾರ್ಡು ಹಚ್ಚುತ್ತಾನೆ. ಅದರ ಪರಿಣಾಮ ವಿರುದ್ಧವಾಗುತ್ತದೆ. ಉಷಾ ಅದನ್ನು ಕೇಳುತ್ತಿರುವಂತೆಯೇ ಹೆಚ್ಚೆಚ್ಚು ಅಸ್ವಸ್ಥಳಾಗುತ್ತಾಳೆ. ಹಾಡು ಮುಗಿಯುವ ಹೊತ್ತಿಗೆ ಭಾವನೆಯು ಉಮ್ಮಳಿಸಿ ಕೂಗಿಕೊಂಡಂತೆ ಅನ್ನುವಳು.)

**ಉಷಾ :—** ಸಾಕು ದೊಡ್ಡಪ್ಪ, ನಾ ಕೇಳಲಾರೆ.

**ಚೈತನ್ಯ :—** ಇದುಂ ಬೇಡಾಯಿತೆ? ಸಂಗೀತಂ ನಿನಕೆ ಸೇರ್‍ತದಲ್ಲ?

**ಉಷಾ :—** (ತನ್ನಷ್ಟಕ್ಕೇ) ಸಂಗೀತ ಅಂದರಾದರೂ ಏನಿರ್‍ತದ? ವಿವಿಧ ಸ್ವರಗಳ ಮಧುರ ಸಂಯೋಜನೆ. ಆ ಸಂಯೋಜನೆ ಸರಿಯಾಗಿಲ್ಲದಿದ್ದರ ಸಂಗೀತವೇ ನಿರ್ಮಾಣ ಆಗಲಾರದು. ಮಾನವರ ಆಯುಷ್ಯ ಕೂಡ ಹೀಂಗs ಅಲ್ಲ? ವಿವಿಧ ಭಾವಗಳ ಉಚಿತವಾದ ಮಿಲನವೇ ಜೀವನ—ಸಂಗೀತದಲ್ಲಿ ಮಧುರತೆ

ತರುವದು. ಇಲ್ಲ ಅಂದರ ನನ್ನಂಥ ವೈಷಮ್ಯದಿಂದ ಕೂಡಿದ ವಿಪರೀತ ಜೀವನ ಪಾಲಿಗೆ ಬರುವದು.

ಚೈತನ್ಯ :— ನಿನಗ ಇತ್ರ್ಯಾದಿಗಂ ಕಷ್ಟ ಏನು ನೇರವ ಕುಟ್ಟಿ? ನೀನು ಧೈರ್ಯಂ ಅವಲಂಬಿಸು. ಪರಮಾತ್ಮ ನಿನ್ನಂ ರಕ್ಷಿಕುಂ.

ಉಷಾ :— ಹಾಂಗಿಲ್ಲ ದೊಡ್ಡಪ್ಪ, (ಒಮ್ಮೆಲೆ ದನಿತೆಗೆದು ಅಳ ಹತ್ತುವಳು.)

ಚೈತನ್ಯ :— (ಅವಳ ಹತ್ತಿರ ಹೋಗಿ) ಏನಿಕ್ಕೆ ಗೊತ್ತಿದೆ ನಿನ್ನ ದುಃಕ್ಕಂ. ನಿನಗೆ ಕಲ್ಯಾಣದ ಚಿಂತಿ. ನಿನ್ನ ಕಲ್ಯಾಣಂ ವೇಗಂ ಮಾಡಿಸುತ್ತೇನೆ; ಅದು ಡಾಕ್ಟರ ಸಂಗಡ.

ಉಷಾ :— (ಕಣ್ಣೊರಸಿಕೊಂಡು) ಇಷ್ಟೊಂದು ಸುಲಭವಾದ ಮಾತಲ್ಲ ದೊಡ್ಡಪ್ಪಾ, ಅದು.

ಚೈತನ್ಯ :— ಅದು ಕಟಿಣಮುಲ್ಲ. ಅವನ ಮಾವವರಿನ್ನುಂ—ಅವನ ಹತ್ತಿರ ನೀ ಹೇಳು—ಡಾಕ್ಟರಿಗೆ ನ್ಯಾನ್ ವಿವಾಹ ಆಗ್ತೇನೆ ಅಂತ.

ಉಷಾ :— (ವಿಚಾರಮಗ್ನಳಾಗಿ) ವಸಂತನ ಮಾವನನ್ನು ಕಂಡು ನಾನು ವಸಂತನ್ನ ಮದಿವ್ಯಾಗ್ತೀನಿ ಅಂತ ಹೇಳಲಿ? ಹ್ಯಾಂಗ ಅವರ, ಕಾಣಲಿ? ನನ್ನನ್ನ ನೋಡಿ ಅವರಿಗೇನನಿಸಬಹುದು?

ಚೈತನ್ಯ :— ಅವನನ್ನು ಬನ್ನಿಸಿದ್ದಾಗ ಆಗಟ್ಟೆ, ಅವನು ತನ್ನ ಮಗಳನ್ನು ಕುರಿತು ಚಿಂತಿನತಾನೆ. ನಾನು ನಿನಕಾಗಿ ಚಿಂತಿಸತೇನೆ.

ಉಷಾ :— ತನ್ನ ಮಗಳ ಚಿಂತಿ? ಅವರ ಮಗಳು? (ಬೇಡಿಕೊಳ್ಳುವ ಸ್ವರದಲ್ಲಿ) ದೊಡ್ಡಪ್ಪ, ಇವತ್ತ ನಾ ಅವರ್ನ ಕಾಣದಿದ್ದರ ನಡೀಲಿಕ್ಕಿಲ್ಲೇನು?

ಚೈತನ್ಯ :— ನಾನು ಅವನ ಕಡೆ ಪ್ರೋಗುನ್ನು. ಬಾಕಿ ವಿಷಯಗಳನ್ನು fix up ಮಾಡ್ತೇನೆ. ನೀನು ಅವರಿಕೆ ಹೇಳಿಬಿಡು. ಅಲ್ಪಂ ಕಳೆದು ಅವರು ಇಲ್ಲಿಗೆ ಬರ್ತಾರೆ.

(ಗಂಟೆಯಾಗುತ್ತದೆ.)

ಉಷಾ :— ಬರ್ರಿ. (ಶ್ರೀಕಾಂತ ಬರುತ್ತಾನೆ. ಅವನ ಕೈಯಲ್ಲಿ ಕಾಗದದಲ್ಲಿ ಸುತ್ತಿದ ಒಂದು ವಸ್ತು ಇದೆ.) ಕೂಡ್ರೆಲ್ಲ. (ಶ್ರೀಕಾಂತ ಒಮ್ಮೆ ಉಷಾ, ಒಮ್ಮೆ ಚೈತನ್ಯ ಇವರ ಕಡೆಗೆ ನೋಡುತ್ತಾನೆ. ಅದನ್ನು

ತಿಳಿದು) ಇವರು ಶ್ರೀಕಾಂತ, ಇವರು ಚೈತನ್ಯದೇವ—ಒಬ್ಬ ಸಾಮಾಜಿಕ ಕಾರ್ಯಕರ್ತರು, ಮಲೆಯಾಳದವರು. ಇವರ ಜತಿಗೇ ನಾನು ಬ್ರಹ್ಮದೇಶದಿಂದ ಹಿಂದುಸ್ಥಾನದಲ್ಲಿ ಬಂದೆ.

(ಶ್ರೀಕಾಂತ ಮತ್ತು ಚೈತನ್ಯ ಪರಸ್ಪರರು ನಮಸ್ಕರಿಸುತ್ತಾರೆ.)

ಚೈತನ್ಯ:— ಹಾಗೇ ಆಗಟ್ಟೆ, ಕುಟ್ಟಿ. ನಾನು ಸ್ವಲ್ಪಂ ಕಳೆದು ಒರೆನು. (ಹೋಗಹತ್ತುವನು.)

ಶ್ರೀಕಾಂತ:—ಎಲ, ನಾನು (ಹೊರಡಲುದ್ಯುಕ್ತನಾಗಿ) ನಿಮಗೇನಾದರೂ ಮಾತಾಡುವದಿತ್ತೋ ಏನೊ! ನಡೀಲಿ, ಸ್ವಲ್ಪಹೊತ್ತಿಗೆ ಬರ್ತೀನಿ.

ಉಷಾ:— ಇಲ್ಲ, ಇಲ್ಲ. ಇವರು ಅವರ್ನ ಕರೆದುಬರಲಿಕ್ಕೆ ಹೊರಟಾರ. ನೀವು ಹೋಗಿರಿ ದೊಡ್ಡಪ್ಪ. (ಚೈತನ್ಯ ಹೋಗುತ್ತಾನೆ.) ಇವತ್ತು ಅವರು ನನ್ನ ಕಾಣಲಿಕ್ಕೆ ಬರುವವರಿದ್ದಾರ.

ಶ್ರೀಕಾಂತ:—(ಅರ್ಥನಾಗದೆ) ಯಾರು ಬರುವವರಿದ್ದಾರ ಭೆಟ್ಟಿಗೆ?

ಉಷಾ:— ನಿಮ್ಮ ಕಕ್ಕ—ಕಕ್ಕಿ ಬರುವವರಿದ್ದಾರಲ್ಲ? ನೀವು ಅವರ ಕಡೆಯಿಂದಲೇ ಬಂದಿರಬೇಕು ಅಂತ ನಾ ತಿಳಿದೆ.

ಶ್ರೀಕಾಂತ.—(ಬೆರಗಾಗಿ) ಅಂದರ? ಕಕ್ಕ—ಕಕ್ಕಿ—ಈಗ ಸದ್ಯದಲ್ಲೇ ಬರುವವರು?

ಉಷಾ.— ನಿಮಗ ಗೊತ್ತಿಲ್ಲ?

ಶ್ರೀಕಾಂತ:—ಸತ್ಯವಾಗಿ ಇಲ್ಲ.

ಉಷಾ:— ನನಗನಿಸಿತು, ನಿನ್ನೆ ನೀವು ನನ್ನ—ಅವರ ಆಪ್ತವ್ಯದ ಮಾತು ಹೇಳಿರಬೇಕು. ಅಂತಲೇ ಇಂದ ಅವರು ನನ್ನ ಕಾಣಲಿಕ್ಕೆ ಬರ್ತಿರಬೇಕು.

ಶ್ರೀಕಾಂತ:—ಇಲ್ಲ. ನಿಮ್ಮ ಆಪ್ತವ್ಯದ ವಿಷಯ ಇದುವರೆಗೆ ನಾನು ಅವರಿಗೆ ಹೇಳಿಲ್ಲ.

ಉಷಾ:— (ಆಶ್ಚರ್ಯಗೊಂಡು) ನಿಜವಾಗಿ? ಇದು ಹ್ಯಾಂಗ ಶಕ್ಯ?

ಶ್ರೀಕಾಂತ.—ಉಷಾತಾಯಿ, ನಿಮ್ಮ ಮತ್ತು ಕಾಕಾ ಅವರ ಆಪ್ತವ್ಯದ ವಿಷಯ, ಪತ್ರಿಕೆಯಲ್ಲಿ ಪ್ರಕಟವಾಗುವ ಕ್ಷುಲ್ಲಕಸುದ್ದಿಯಂಥ

ಸುದ್ದಿಯಿಲ್ಲ, ತಿಳಿದಕೂಡಲೇ ಎಲ್ಲರೆದುರಿಗೆ ಹರಡಲಿಕ್ಕೆ! ತಾರುಣ್ಯದ ಉಲಕೋಚಿತನದಲ್ಲಿ ಮಾಡಿದ ತಪ್ಪಿನ ಮೂಲಕ, ಕಾಕಾ ಅವರು ಈಗ ಎಂಥ ವಿಚಿತ್ರ ಪ್ರಸಂಗವನ್ನ ಎದುರಿಸ ಬೇಕಾಗೇದ! ತಮ್ಮ ಅಕ್ಕನ ಸವತಿಯಾಗುವ ಹುಡುಗಿ ಯಾರು ಅನ್ನುವದರ ಕಲ್ಪನೆಯೇ ಇಲ್ಲ ಪಾಪ, ಅವರಿಗೆ! ಇತ್ತ ನಿಮ್ಮ ಅಂತಃಕರಣದಲ್ಲಂತೂ ತಂದೆಯ ಬಗ್ಗೆ ಹೇಳ-ತೀರದಷ್ಟು ತಿರಸ್ಕಾರ! ಈ ಪರಿಸ್ಥಿತಿಯಲ್ಲಿ ನಿಮಗೆ ಏನಾದರೂ ನಾಲ್ಕು ಮಾತು ಹೇಳಿ, ಕಾಕಾ ಅವರ ಮನಸ್ಸನ್ನ ತುಸು ಅನುಕೂಲಮಾಡಿ, ಒಂದೆರಡು ದಿನಗಳ ನಂತರ ಈ ವಿಷಯ ಅವರಿಗೆ ಹೇಳಬೇಕು, ಅಂತೆಲ್ಲಾ ನಾನು ನಿರ್ಧಾರಮಾಡಿ ಕೊಂಡಿದ್ದೆ. ಇಲ್ಲೆ ಕೇಳಿದರ, ಅವರು ಈಗ ಬಂದೇ ಬಿಡ್ತಾರ ಅನ್ನೋ ಮಾತು ತಿಳೀತು.

ಉಷಾ :— ಚೈತನ್ಯರ ಹತ್ತಿರ ಸಹ, ಇಂದ ಅವನ್ನ ಕಾಣ್ತೇನಿ ಅಂತ ಒಪ್ಪಿಕೊಂಡೆ ಆಗಿನಿಂದ ನನಗೂ ಒಂದು ರೀತಿ ಅನಸ್ತಾ ಅದ.

ಶ್ರೀಕಾಂತ :— ಉಷಾತಾಯಿ, ನೀವು ನನ್ನ ಶಾರದಾಕಕ್ಕಿಯ ಮಗಳು ಅಂತ ತಿಳಿದವ್ಯಾಲ, ನನ್ನ ಅಂತಃಕರಣದವ್ಯಾಲ ಅದೆಂಥ ವಿಚಿತ್ರ ಪರಿಣಾಮ ಆತ್ಯ ಅಂತ ಹೇಳಲಿ! ಮನೀಗೆ ಹೋದವ್ಯಾಲ ಯಾರ ಜತಿಗೂ ಮಾತಾಡೋ ಮನಸ್ಸಾಗಲಿಲ್ಲ ನನಗ. ಆ ಅಘಟಿತಘಟನೆ, ವರ್ತಮಾನಕಾಲದ ತೆರೆಯನ್ನೆತ್ತಿ, ೩೦ ವರ್ಷದ ಹಿಂದಿನ ಭೂತಕಾಲದಲ್ಲಿ ನನ್ನನ್ನೊಯ್ದು ಬಿಟ್ಟಿತು. ನಿನ್ನೆಯಿಂದ ನನ್ನ ಮತ್ತು ಶಾರದಾಕಕ್ಕಿಯ ಅದೇ ಜೀವನದ ಚಿತ್ರಪಟವನ್ನ ನೋಡ್ತಾ ಇದ್ದೇನಿ. ನಾನು ಏಳೆಂಟು ವರ್ಷದವ ಇರಬಹುದು. ಶಾರದಾಕಕ್ಕಿ ಸಾಯಂ-ಕಾಲ ಆತ್ಯ ಅಂದರ, ದೇವರೆದುರಿಗೆ ನಿರಾಂಜನ ಹಚ್ಚುವಾಕಿ, ನನಗ ಅಂಕಿ-ಮಗ್ಗಿ ಹೇಳಕೊಡುವಾಕಿ, ಕಥಿ ಹೇಳುವಾಕಿ, ಅಜ್ಜೀ ಕಣ್ಣು ತಪ್ಪಿಸಿ ನನ್ನ ಜತಿಗೆ ಇಸ್ಪೇಟುಕೂಡ ಆಡುವಾಕಿ!

ಕಕ್ಕಗೂ ಅಜ್ಜಿಗೂ ಅವಳ ಮ್ಯಾಲ ಪ್ರೀತಿ ಇಲ್ಲದ್ದರಿಂದ, ನಮ್ಮ ಏಕತ್ರ ಕುಟುಂಬದಲ್ಲಿ ನಾನೇ ಆಕಿಗೆ ಜೋಡಿಯುವನಾಗಿದ್ದೆ. ಮುಂದೆ ಆಕಿ ಒಮ್ಮೆ ತವರಮನಿಗೆ ಹೋದಾಕಿ ತಿರುಗಿ ಬರಲೇ ಇಲ್ಲ. ಅದರ ಕಾರಣಾ ಆಗ ನನಗ ತಿಳೀಲಿಲ್ಲ. ಆದರ ಎಷ್ಟೋ ದಿವಸ ಜೀವಕ್ಕ ಭಣಭಣ ಅನಿಸಿ, ನನಗ ಯಾವಾಗಲೂ ಆಕೆಯ ನೆನಪು ಆಗೋದು. ಆಕಿ ತಿರುಗಿ ಬರಬೇಕು, ನನ್ನ ಜತಿಗೆ ಇಸ್ಪೇಟು ಆಡಬೇಕು—ಅಂತ ಬಹಳ ಅನಿಸಬೇಕು ನನಗ. ಆದರ ಅದೆಂದೂ ಆಗಲೇ ಇಲ್ಲ. ಮುಂದ ಒಂದು ದಿನ ಇಂದಿರಾಕಕ್ಕ ಮನೀಗೆ ಬಂದರು. ಉಷಾ, ನಿನ್ನೆ ನಿನ್ನ ನೋಡಿದೆ. ತಟ್ಟನೆ ಶಾರದಾಕಕ್ಕೆಯನ್ನ ನೋಡಿದ ಭಾಸಾಯಿತು! ಅವಳೇ ತಿರುಗಿ ಬಂದಳೇನೋ ಅನಿಸಿತು. ಎಂಥ ವಿಲಕ್ಷಣ ಸಾಮ್ಯ! ಕ್ಷಮಿಸಿರಿ ಆಂ!

**ಉಷಾ:—** ಯಾಕ? ಕ್ಷಮಾ ಯಾಕ?

**ಶ್ರೀಕಾಂತ:—** ತಪ್ಪಿ ನಿಮ್ಮನ್ನ ಒಂಟಿ ಹೆಸರಿಲೆ ಕರೆದೆ—ಉಷಾ ಅಂದೆ.

**ಉಷಾ:—** ಅದರಲ್ಲೇನು ಹಿರೇ ಅಣ್ಣನ ಹಕ್ಕs ಅದ!

**ಶ್ರೀಕಾಂತ:—** ಹೀಂಗ ನನಗೂ ಅನಿಸ್ತದ. ನಿನ್ನೆ ಇಡೀ ದಿನವೆಲ್ಲ ಶಾರದಾ ಕಕ್ಕೇನ್ನ ತಿರುಗಿ ನೋಡಬೇಕು—ಅಂಬೊ ಆಶೆಯಾಗಿ, ಬಹಳ ವ್ಯಸನಬಟ್ಟೆ. ಮನೆಯಲ್ಲಿ ಇದ್ದಬಿದ್ದ ಫೋಟೋಗಳನ್ನೆಲ್ಲ ಹುಡುಕಿದೆ. ಅದರಲ್ಲಿ ನನ್ನ ಮುಂಜಿಯ ಕಾಲದ ಈ ಗ್ರೂಪ್ ಫೋಟೋ ಸಿಕ್ಕಿತು. ಶಾರದಾಕಕ್ಕಿಯ ಕೊನಿಯ ಫೋಟೋನs ಇದು ನೋಡ್ರಿ.

(ಉಷಾ ಫೋಟೋ ನೋಡುತ್ತಾಳೆ.)

**ಉಷಾ:—** ಆದರ, ಇದಕ್ಕೂ ತರುವಾಯದ ಇನ್ನೊಂದು ಫೋಟೋ ನನ್ನ ಹತ್ತಿರ ಅದ.... ನಾನು ಒಂದು ವರ್ಷದ ಕೂಸಿದ್ದಾಗ ತಗದದ್ದು. ತರ್ತೀನಿ, ನಿಲ್ಲಿರಿ ಆಂ. (ಒಳಗೆ ಹೋಗಿ ಫೋಟೋ ತರುತ್ತಾಳೆ. ಇಬ್ಬರೂ ಆ ಫೋಟೋಗಳನ್ನು ಹತ್ತಿರ್ಹತ್ತಿರ ಹಿಡಿದು ನೋಡುತ್ತಾರೆ)

ಶ್ರೀಕಾಂತ:—ಥೇಟ್ ಅದೇ ರೂಪ, ಅದೇ ವೇಷ. ನಡಮಧ್ಯ ಬೈತಲ, ಮೊಡ್ಡಂಚಿನ ಕುಬಸ, ಉದ್ದನ ಕುಂಕುಮ, ಒಂದೇ ಥರ. (ಉಷೆಯ ಕಡೆಗೆ ನೋಡಿ) ಉಷಾತಾಯಿ, ತಾಯೀಹಾಂಗ ಡ್ರೆಸ್ ಮಾಡಿದರ, ನೀವು ಕೂಡ ಥೇಟ್ ಶಾರದಾಕಕ್ಕೀ ಹಾಂಗ ಕಾಣಸ್ತೀರಿ!

ಉಷಾ.— ಹೀಂಗs? (ಉಷೆಯ ಲಕ್ಷ್ಯ ಫೋಟೋದ ಕಡೆಗೇ ಇರುತ್ತದೆ. ಅದನ್ನು ನೋಡು-ನೋಡುತ್ತ, ಸಿಟ್ಟು ಬಂದು) ಮತ್ತ ಇವರು ನಿಮ್ಮ ಕಕ್ಕ ಅಲ್ಲ?

ಶ್ರೀಕಾಂತ:—ಹೌದು, ನನ್ನ ಕಕ್ಕ, ನಿಮಗ ಜನ್ಮಕೊಟ್ಟ ತಂದಿ!

ಉಷಾ:— ಹುಂ, ತಂದಿ!

ಶ್ರೀಕಾಂತ:—ಯಾಕ ಅವರ ಬಗ್ಗೆ ಇಷ್ಟು ಸಿಟ್ಟು ಇಟಗೊಂಡೀರಿ ಉಷಾ ತಾಯಿ? ಕಕ್ಕ-ಕಕ್ಕಿ ಹಾಂಗ ನಿಜನಾಗೇ ಒಳ್ಳೆಜನ ಇದ್ದಾರವರು.

ಉಷಾ.— (ವ್ಯಂಗ್ಯವಾಗಿ) ಇದ್ದಿದ್ದಾರು ಪಾಪ! ಒಳ್ಳೇಜನ!

ಶ್ರೀಕಾಂತ:—ಕೈಯಿಂದ ಯಾವದೇ ಒಂದು ತಪ್ಪಾತ್ಯು ಅಂದರ, ಅಷ್ಟ ರಿಂದಲೇ ಮನುಷ್ಯ ಪಿಶಾಚಿ ಆಗಿಬಿಡೋದಿಲ್ಲ.

ಉಷಾ — ಒಂದು ತಪ್ಪು? ಪರರ ಪ್ರಾಣಾ ತೊಗೊಳ್ಳುವ ತಪ್ಪು!

ಶ್ರೀಕಾಂತ:—ಉಷಾತಾಯಿ, ಇಪ್ಪತ್ತೈದು ವರ್ಷದ ಹಿಂದಿನ ಕಾಲ ಅದು. ಆ ಕಾಲದಲ್ಲಿ ಕಾಕಾ ಅವರಿಗೆ ಇದು ತಪ್ಪು ಅಂತಕೂಡ ಅನಿಸಿರಲಿಕ್ಕಿಲ್ಲ. ಈಗಲೂ ಲಗ್ನದ ವಿಷಯದಲ್ಲಿ ಇಂಥ ತಪ್ಪು ಮಾಡೋದು, ನಾವು ಪುರುಷರು—ನಮ್ಮ ಜನ್ಮಸಿದ್ಧ ಹಕ್ಕು ಅಂತಲೇ ಭಾವಿಸ್ತೀವಿ!

ಉಷಾ — ಮತ್ತ ಇಂಥ ಪ್ರಸಂಗ ಒದಗಿತು ಅಂದರ, ನಿಮಗ ಅದರ ಪ್ರಾಯಶ್ಚಿತ್ತ ಆಗೋಹಾಂಗ ಮಾಡೋದೂ ನಮ್ಮ ಹಕ್ಕದ ಅಂತ ನಮಗೂ ಇತ್ತೀಚೆಗೆ ಅನಿಸಲಿಕ್ಕೆ ಹತ್ತೇದ! ಹೇಳ್ರಿ ನಿಮ್ಮ ಕಕ್ಕಂದಿರಿಗೆ ಇಪ್ಪತ್ತೈದು ವರ್ಷದ ಹಿಂದ ತಪ್ಪು ಮಾಡಿ ಅಪ್ಪೂಟ ತಪ್ಪಿಸಿಕೊಂಡಿರಿ; ಈಗ ಭೋಗಿಸಿರಿ ಅದರ ಪ್ರಾಯಶ್ಚಿತ್ತ!

(ಕೈಯಲ್ಲಿಯ ಫೋಟೋ ಒಗೆಯುತ್ತಾಳೆ)

**ಶ್ರೀಕಾಂತ:**—ಛೊ, ಛೊ, ಛೊ! ಉಷಾತಾಯಿ, ಇಷ್ಟೊಂದು ಸೇಡಿನ ಭಾವನೆ ಸ್ತ್ರೀಜಾತಿಗೆ ತಕ್ಕದ್ದಲ್ಲ. ಈ ಪ್ರಾಯಶ್ಚಿತ್ತ ಯಾರಿಗೆ ನೀವು ಕೊಡ್ತ ಇದ್ದೀರಂಬೋದನ್ನ ವಿಚಾರಮಾಡಿರಿ. ತಪ್ಪು ಕಾಕಾ ಅವರದು—ಒಬ್ಬ ಪುರುಷನದು! ಆದರ ಶಿಕ್ಷೆ ಯಾಗೋದು ಒಬ್ಬ ನಿರಪರಾಧಿಯಾದ ಸ್ತ್ರೀಯಳಿಗೆ! ಅದು ಕೂಡ, ಒಬ್ಬ ಸ್ತ್ರೀಯಳಿಂದಲೇ! ಇದೆಂದೂ ನ್ಯಾಯ ಅನಿಸಲಾರದು.

**ಉಷಾ:**— ಮತ್ತ ನಿಮ್ಮ ಕಕ್ಕಂದಿರರದು ಮಾತ್ರ ನ್ಯಾಯ, ಅಲ್ಲs?

**ಶ್ರೀಕಾಂತ:**—ಯಾರಂತಾರ ನ್ಯಾಯ ಅಂತ? ಅದಂತೂ ಶುದ್ಧ ಅನ್ಯಾಯ. ಅವರು ಮಾಡಿದ್ದು ತಪ್ಪು ನಿಜ. ಆದರೂ ಅವರು ಗಂಡಸರಿದ್ದಾರ—ಉಷಾತಾಯಿ, ಪುರುಷರ ಮತ್ತು ಸ್ತ್ರೀಯರ ಅಂತಃಕರಣದ ಧರ್ಮಗಳೇ ಬಹಳ ಭಿನ್ನ; ಅದರಂತೆ ಸಂಸ್ಕಾರವೂ ಭಿನ್ನ. ನಮ್ಮ ಗಂಡಸರ ಅಂತಃಕರಣ ಇನ್ನೊಂದು ಮನಸ್ಸಿನ ವಿಚಾರವನ್ನೂ ಮಾಡದೆ, ಸುಖವನ್ನಷ್ಟೇ ಹನಿಹನಿಯಾಗಿ ಹೀರಿಕೊಳ್ಳಬೇಕು ಅಂತ ಹವಣಿಸ್ತಾವ. ಆದರೆ ಅದೇ ನಿಮ್ಮ ಹೆಂಗಸರ ಅಂತಃಕರಣ, ತಾಯಿ ಪೃಥ್ವಿಯನ್ನ ತಣಿಸಲು ಹೊರಟ ನೀಲಮೇಘಗಳಂತೆ, ಪ್ರೇಮಜಲವನ್ನ ಸಿಂಪಡಿಸಿ. ಪುರುಷ ಜೀವನವನ್ನ ಪ್ರಫುಲ್ಲಗೊಳಿಸ್ತಾವ! ಉಷಾತಾಯಿ, ಶಾರದಾ ಕಕ್ಕಿಯವರಮ್ಯಾಲ ಅನ್ಯಾಯ ಆಗಿದ್ದರೂ, ಕಾಕಾ ಅವರಿಗೆ ಅದಕ್ಕಾಗಿ ಪ್ರಾಯಶ್ಚಿತ್ತ ಕೊಡುವದು ಬ್ಯಾಡ. ಸ್ತ್ರೀಯರ ಧರ್ಮ ಸೇಡು ತೀರಿಸಿಕೊಳ್ಳುವದಲ್ಲ, ಪ್ರೇಮ ಮಾಡುವದು.

**ಉಷಾ:**— ಹೌದು, ಈ ಧರ್ಮ ನಿರ್ಣಯಿಸಿದವರ್ಯಾರು? ನಿಮ್ಮ ಅನುಕೂಲಕ್ಕಾಗಿ ನೀವು ನಿರ್ಣಯಿಸಿದಿರಿ. ಆದರ ಶ್ರೀಕಾಂತ, ಈ ಮುಖಸ್ತುತಿಗೆ ಮರುಳಾಗುವ ಕಾಲ ಹೋಯಿತು. ನಮ್ಮ ಧರ್ಮ ನೀವು ನಿರ್ಣಯಿಸೋದು ಬ್ಯಾಡ. ಬೇಕಾದರ ಪ್ರೇಮ ಮಾಡೇವು; ಬ್ಯಾಡಾದರ ಸೇಡೂ ತೀರಿಸಿಕೊಂಡೇವು.

ಶ್ರೀಕಾಂತ:—ಇದು ನಿಮ್ಮ ಧರ್ಮ ಅಲ್ಲ, ಉಷಾತಾಯಿ. ನಿರ್ಮಿತಿ ಮಾಡೋದು, ಆ ನಿರ್ಮಿತಿಯ ಸಂರಕ್ಷಣಕ್ಕಾಗಿ ಮನಿ ಮಾಡೋದು, ಅನ್ನ ನೀರು ಉಣಿಸೋದು, ಅದರ ಸುಖ ಕ್ಕಾಗಿ ಹವಣಿಸೋದು — ಇದು ನಿಮ್ಮ ಧರ್ಮ. ಅದರ ನಾವು ಗಂಡಸರು ನಿರ್ಮಿಸಿದ ಸಂಸ್ಕೃತಿ, ಆ ನಿಮ್ಮ ಮಕ್ಕಳು-ಮರಿಗಳ ಅಕಲ್ಯಾಣಮಾಡದೆ ಎಂದೂ ಇರಲಾರದು. ಅದ ರಿಂದ ಅವರನ್ನ ಉಳಿಸಬೇಕಾಗಿದ್ದರ, ನಮ್ಮ ಹಾದಿಯಲ್ಲೇ ನೀವು ನಡದರಾಗದು. ಅವರ ಸುಖಕ್ಕಾಗಿ ಪ್ರಗತಿಯ ಹೊಸ ಹಾದಿ ನೀವು ಹುಡುಕಲಿಕ್ಕೆ ಬೇಕು, ಹೊಸ ಸಮಾಜ ನೀವು ಕಟ್ಟಲಿಕ್ಕೆ ಬೇಕು.

ಉಷಾ:— ಎಷ್ಟು ಛಂದಾಗಿ ಮಾತಾಡ್ತೀರಿ ನೀವು! ಚೈತನ್ಯರು ಹೋಗಿ ತುಂಬ ಹೊತ್ತಾತ್ತು. ನಿಮ್ಮ ಕಕ್ಕ-ಕಕ್ಕಿ ಇಷ್ಟರಲ್ಲೇ ಬರಬಹುದು. (ಫೋಟೋ ಎತ್ತಿ, ಅದನ್ನು ಲಕ್ಷ್ಯಕೊಟ್ಟು ನೋಡುತ್ತ) ಅವರು ಬರುವವರೆಗೆ ನೀವು ನಿಲ್ಲರಿ ಹಾಂ.

ಶ್ರೀಕಾಂತ:—ಹೌದು, ನಿಲ್ಲಲೇಬೇಕು. ಒತ್ತಟ್ಟಿಗೆ ನೀವು, ಇನ್ನೊತ್ತಟ್ಟಿಗೆ ನಮ್ಮ ಕಕ್ಕ, ಅಂದಮ್ಯಾಲ ಇಬ್ಬರ ಪರನಾಗಿಯೂ ನಾನು ನಿಲ್ಲಲೇಬೇಕು.

ಉಷಾ:— ಅಗುವರೆಗೆ ಕೂತಿರ್ರಿ. ನಾನು ಒಳಗೆ ಹೋಗಿ ಬಟ್ಟೇ ಬದಲಾಯಿಸಿಕೊಂಡು ಬರ್ತೇನಿ. (ಹೋಗುತ್ತಿರುವಾಗ, ತಿರುಗಿ ನೋಡಿ) ನಿಮ್ಮ ಕಕ್ಕ-ಕಕ್ಕಿ ನನ್ನ ಮನಸ್ಸು ತಿರುಗಿಸುವ ಪ್ರಯತ್ನ ಮಾಡುವವರಿದ್ದಾರಂತ! ನೋಡಿರಿ, ಈಗ ಮೋಜು ಏನಾಗ್ತದೊ! ಅವರು ಬಂದರ ನನ್ನ ಕೂಗರಿ ಹಾಂ! (ವ್ಯಂಗ್ಯ ವಾಗಿ ನಕ್ಕು ಒಳಗೆ ಹೋಗುತ್ತಾಳೆ.)

ಶ್ರೀಕಾಂತ:—(ಸ್ವಗತ) ಹಂ, ಶ್ರೀಕಾಂತರಾಯಾ, ಮುಂದಬರೊ ಪ್ರಸಂಗಕ್ಕ ಇನ್ನ ಸಿದ್ಧನಾಗು. (ದೊಪ್ಪನೆ ಕೆಳಗೆ ಕುರ್ಚಿಯಮೇಲೆ ಕೂಡು ತ್ತಾನೆ. ಬೇಬಿ ಮೆಲ್ಲನೆ ಬಾಗಿಲು ತೆರೆದು ಬರುತ್ತಾಳೆ.)

ಬೇಬಿ:— ಭಲೆ! ದಾದಾ!

ಶ್ರೀಕಾಂತ:—ಅಂ, ಬೇಬೀ! ನೀನು ಹ್ಯಾಂಗ ಬಂದಿ ಇಲ್ಲೆ?

ಬೇಬಿ:— ನೀ ಹ್ಯಾಂಗೊ, ಹಾಂಗs ಬಂದೆ ನಾನೂ! ನನಗ ತಿಳೀಧಾಂಗ ನೀವೆಲ್ಲರೂ ಇಲ್ಲಿ ಬರೋ ಹಂಚಿಕಿ ಮಾಡಿದ್ದಿರಿ. ಅದು ನನಗ ತಿಳೀತು. ಅಂತs ಬಂದೆ····ಪರಭಾರೆ ಕಾಲೇಜದಿಂದ. ಅವರೆಲ್ಲಿದ್ದಾರ?

ಶ್ರೀಕಾಂತ:—ಒಳಗ.

ಬೇಬಿ:— ಅಲ್ಲೊ, ನೀ ಇಲ್ಲೆ ಛೆಲೊ ಮನೀಯವನ್ಹಾಂಗs ಕೂತೀ-ಯಲ್ಲೊ?

ಶ್ರೀಕಾಂತ:—(ಕೂಡಲೆ) ಹೌದಲ್ಲs! ಇದು ಮಂದೀ ಮನಿಯಲ್ಲ? ಖರೆ ಹೇಳಲ್ಯಾ, ಬೇಬೀ? ಇತ್ತೀಚೆಗೆ ಸ್ವಂತ ಮನಿ, ಮಂದೀಮನಿ, ಹಾಟೆಲು, ಜೇಲು ಇದರೊಳಗಿನ ತಾರತಮ್ಯಾನs ತಲಿಯೊಳಗ ಉಳೀಧಾಂಗ ಆಗೇದ? ಅದಿರಲಿ, ಬೇಬೀ, ನೀ ಇಲ್ಲೆ ಬಂದದ್ದು ಕಾಕಾ ಅವರನ್ನ ಕೇಳದs ಬಂದಿ. ಒಳ್ಳೇದಲ್ಲ ಹಂ ಇದು.

ಬೇಬಿ:— ಕೇಳಿದ್ದರ ಅವರು ಇಲ್ಲೆ ಬರಲಿಕ್ಕೆ ಕೊಡ್ತಿದ್ದರೇನು? ಅದಕ್ಕs ಕಾಲೇಜದಿಂದ ಪರಭಾರೆ ಬಂದೆ.

ಶ್ರೀಕಾಂತ:—ಒಳ್ಳೇದು, ಈಗ ನನ್ನ ಮಾತು ಕೇಳು, ಜಾಣ ಹುಡುಗೀ ಹಾಂಗ ಝಟ್ನ ಮನೀಗೆ ಹೋಗು ನೋಡೋಣ.

ಬೇಬಿ:— ಉಂ, ನಾ ಯಾಕಂತ ಹೋಗಲಿ? ನಾ ಏನು ತೊಟ್ಟಿಲ ದಾಗಿನ ಕೂಸಲ್ಲ! ಮೊನ್ನೆ ಅಪ್ಪ ಹೀಂಗs ನನ್ನ ಒಳಗ ಕಳಿಸಿದರು, ಚಹಾದ ನೆವಮಾಡಿ. ಈಗ ನಾ ಹೋಗೋದೇ ಇಲ್ಲ. ನೀವೇನೇನು ಮಾತಾಡ್ತೀರೋ ನನಗೂ ಕೇಳಬೇ-ಕಾಗೇದ. ಏನೊ, ನೀನು ನಿನ್ನೆ ವಸಂತರಾಯನ್ನ ಕಂಡಿ, ಏನೇನು ಮಾತಾಡಿದಿ, ಅದನ್ನಸಹಿತ ಹೇಳಲಿಲ್ಲ.

ಶ್ರೀಕಾಂತ:—ವಸಂತನ ಜತಿಗೆ? ಜsಗ್ಗಿ ಮಾತಾಡಿದಿವಿ!

ಬೇಬಿ:— ಹೌದು? ಏನೇನು ಮಾತಾಡಿದಿರೆಪಾ?

ಶ್ರೀಕಾಂತ:—ಅದs····ಈ ನಮ್ಮ ವೈದ್ಯಶಾಸ್ತ್ರಕ್ಕ ಯಾವ ಪರಿಭಾಷಾ ಇರಬೇಕು ಅಂತ ಚರ್ಚಿಸಿದಿವಿ. ಅಂದರ, ಈ ಅಪೆಂಡಿ-

ಸಾಯಿಟೆಸ್ಸಿಗೆ 'ಉಂಡ್ರುಪುಚ್ಛವಿದ್ರಧಿ' ಈ ಹೆಸರು ಯೋಗ್ಯ ಆದೀತೋ ಹ್ಯಾಂಗ? ಮಾತ್ರ ನಮ್ಮ ಆಯುರ್ವೇದದೊಳಗ ಈ ಖಾರಗೆಣಸು, ಕಟಗರೋಣಿ ಇವಕ್ಕೇನು ಅವಾಸ್ತವ ಮಹತ್ವ ಕೊಟ್ಟಾರಲ್ಲ—ಇದು ಯೋಗ್ಯದನೊ ಇಲ್ಲೊ ಈ ವಿಷಯದ್ದೂ ವಿಚಾರ ಮಾಡಿದಿವಿ.

ಚೇಬಿ:— ಹುಂ, ಮತ್ತ ಯಾವ ವಿಷಯ ಹೊರಟಿತ್ತವಾ?

ಶ್ರೀಕಾಂತ:—ಮತ್ತ? ಖಗೋಲಶಾಸ್ತ್ರದ ಬಗ್ಗೆ ಸಹ ಮಾತಾಡಿದಿವಿ. ಅಂದರ ಹಿಂಗ, ಯಾವಾಗಲೂ ತಮ್ಮ ಕಕ್ಷೆಯಲ್ಲಿ ತಿರುಗುವ ಈ ಗ್ರಹ ಗಳು ಸ್ವಂತ ಕಕ್ಷೆ ಬಿಟ್ಟು ತಿರಗೊ ಈ ಮಾನವನ ಮ್ಯಾಲ ವರ್ಚಸ್ಸು ನಡಸ್ತಾವೋ ಇಲ್ಲೊ?

ಚೇಬಿ:— ಅಲ್ಲೊ, ಈ ಎಲ್ಲಾ ಹಾಳುಹರಟಿ ಮಾತಾಡಲಿಕ್ಕೆ ಹೋಗಿದ್ಯೊ, ಏನು ವಸಂತರಾಯನ ಮದಿವಿಯ ಬಗ್ಗೆ ಮಾತಾಡಲಿಕ್ಕೆ ಹೋಗಿದ್ಯೊ?

ಶ್ರೀಕಾಂತ:—ಮದಿವೀ ಬಗ್ಗೂ ಮಾತಾಡಿದಿವಲ್ಲ!

ಚೇಬಿ:— ಹಂಗಾರ ನಿನ್ನ ಮಿತ್ರಶ್ರೇಷ್ಠನಿಗೆ ಖಂಡತುಂಡ ಕೇಳಿದಿಲ್ಲೊ, —ನೀ ಈ ಮದಿವಿ ಯಾಕ ಮಾಡಿಕೋತೀ ಅಂತ?

ಶ್ರೀಕಾಂತ.—ಛೆ, ಇಲ್ಲ ಬಿಡು ಅದನ್ನ ಕೇಳಲಿಲ್ಲ!

ಚೇಬಿ:— ಅದನ್ನ ಯಾಕವಾ ಕೇಳಲಿಲ್ಲ ಹಂಗಾರ?

ಶ್ರೀಕಾಂತ:—ಹ್ಯಾಂಗ ಕೇಳೋದು? ಗಂಡಸರಿಗೆ ಎರಪನೇದು ಬಿಡು, ಮೊದಲನೆ ಮದಿವಿಯಾದರೂ ತಾವು ಯಾಕ ಮಾಡಿಕೋತೀವಿ ಅಂಬೋದು ಎಲ್ಲೆ ಗೊತ್ತಿರ್ತದ? ಹೆಣ್ಣು ಹೇಳಿ ಬರ್ತಾವ, ಅಂತ ಗಂಡಸು ಮದಿವ್ಯಾಗತಾನ!

ಚೇಬಿ:— ದಾದಾ, ನೀನು ಮಾತು ಹಾರಹೊಡೀತಿದಿ ಅಂಬೋದು ನನಗ ತಿಳಿಯೋದಿಲ್ಲ—ಅಂತ ತಿಳೀಬ್ಯಾಡ.

ಶ್ರೀಕಾಂತ:—ತಿಳೀತಿದ್ದರ ಹೋಗು ನೋಡೋಣ ಮನೀಗೆ. ಇಲ್ಲೆ ಏನು ಮಾತು ನಡೀತದ ಅಂಬೋದು ನಾ ನಿನಗ ಒಂದೂ ಬಿಡದ ಹೇಳ್ತೀನಿ. ಆದರ ಈಗ ಇಲ್ಲೆ ನೀ ಇರೋದು ಥರ ಅಲ್ಲ.

ಬೇಬಿ:— ಅದ್ಯಾಕ? ನಾನೂ ಉಷಾತಾಯಿಗೆ ಜವಾಬು ಕೇಳೋ ಆಕಿದ್ದೀನಿ.

ಶ್ರೀಕಾಂತ:—ಹಂ? ಕೇಳುವಾಕಿ ಏನ್ನೀನು?

ಬೇಬಿ:— ಕೇಳ್ತಿನಿ— ನೀವು ನಮ್ಮ ಅಕ್ಕನ ಸುಖದಲ್ಲಿ ಯಾಕ ವಿಷ ಕಲಸ್ತಾ ಇದ್ದೀರಿ ಅಂತ.

ಶ್ರೀಕಾಂತ:—ಮತ್ತ ನೀವು ಅವಳ ಪ್ರೇಮಭಂಗಮಾಡಿ ಅವಳ ಸುಖದಲ್ಲಿ ವಿಷ ಕಲಸ್ತಾ ಇದ್ದೀರಲ್ಲ, ಅದು?

ಬೇಬಿ:— ಹಾದಾ, ಸ್ವಂತ ತಂಗಿಯಕಿಂತ ನಿನಗ ಈ ಬಾಯವ್ವನ ಬಗ್ಗೇ ಹೆಚ್ಚಿನ ಚಿಂತಿ ಅನಸ್ತದಲ್ಲ? ಹಾಂಗಿದ್ದರ ಅವಳ ಮದಿವೀನೇ ಮಾಡಿಸಿಬಿಡು ವಸಂತರಾಯರ ಜತಿಗೆ! ಹೆಂಗಸರ ಭಾವನೆಯ ಬೆಲಿ ನಿಮಗೆಷ್ಟೂ ಇಲ್ಲ. ಅನ್ನೋದು ಖರೆ!

ಶ್ರೀಕಾಂತ:—ನಿನಗಾದರೂ ನಿನ್ನ ಅಕ್ಕನ ಭಾವನೆಯಷ್ಟೇ ಬೆಲಿ ಅದ. ನಿನಗನಿಸ್ತದ, ನಿಮ್ಮ ಅಕ್ಕಗ ಸವತಿ ಬರಲಿಲ್ಲ ಅಂದರ ಎಲ್ಲಾ ಸ್ತ್ರೀ ಜಾತಿಯದೂ ಸಮಸ್ಯೆ ಪರಿಹಾರಾಯ್ತು ಅಂತ.

ಬೇಬಿ:— ಹಿಂಗೆಂದೂ ಇಲ್ಲ, ಯಾರದೇ ಇರಲಿ, ಸವತೀ ಮ್ಯಾಲ ಮದಿವಿ ಆಗಬಾರದು ಅನ್ನೋದಕ್ಕಾಗಿ ನಾವು ಚಳವಳಿ ಮಾಡ್ತೀವಿ. ತನ್ನ ಎದಿಯ ಮ್ಯಾಲ ಸವತಿ ಅಂದರ, ಆ ಸ್ತ್ರೀಯಳ ಜೀವಂತ ಬಲಿದಾನ.

ಶ್ರೀಕಾಂತ:—ಹಂ! ಸವತಿ ಬಂದಾಗ ಹೆಂಗಸರ ಬಲಿದಾನ ಆಗ್ತದ ಅಂತ ನಿಮ್ಮ ಗ್ರಹಿಕಿ! ಆದರ ಇದಕ್ಕೂ ಹೆಚ್ಚಿನ ಬಲಿದಾನ —ಹಣೇ ತುಂಬ ಕುಂಕುಮ ಇಟ್ಟುಕೊಂಡು, ಗಂಡನ ಸಂಗಡ ಸಂಸಾರಮಾಡೋ ಹೆಂಗಸರ ಬಲಿದಾನ— ಇಂಥ ಎಷ್ಟೋ ಮನೆಗಳಲ್ಲಿ ನಡಿದಿದ್ದೀತು, ಅದು ಮಾತ್ರ ನಿಮ್ಮ ಕಣ್ಣಿಗೆ ಕಾಣೋದಿಲ್ಲ! ಆ ಬಲಿದಾನದ ವಿರುದ್ಧ ಎಲ್ಲೂ, ಯಾರೂ ನೀವು ಚಳುವಳಿ ಸುರುಮಾಡಲಿಲ್ಲ. ಸ್ವಂತದ ಮನಸ್ಸನ್ನೂ ಕೊಂದು, ಗಂಡನ ಪಾಶವೀ ಇಚ್ಛೆಗೆ ತುತ್ತಾಗುವ

ಹೆಂಗಸರನ್ನ ನೀವು ಪತಿವ್ರತೆಯರು ಅಂತ ಪೂಜಿಸ್ತೀರಿ! ಮುಖದ ಮ್ಯಾಲ ಸಮಾಧಾನದ ಕಳೆ ಕಟ್ಟಿಗೊಂಡು ನಿಂತ, ಮನೆಯಲ್ಲಿಯ ಮೃತಶಾಂತತೆಯ ರಕ್ಷಿಣಿಯರನ್ನ ನೀವು ಭಾಗ್ಯಲಕ್ಷ್ಮೀ ಅಂತ ಭಾವಿಸ್ತೀರಿ! ಬಾಳ್ವೆಬಿಟ್ಟು, ಹೊಸತಿಲ ಹೊರಬಿದ್ದು ಯಾರು ಎಂದೂ ತಮ್ಮ ಗಂಡಂದಿರ ಅಯೋಗ್ಯತೆ ಯನ್ನ ಅಗಸಿಗೆ ಕಟ್ಟಲ್ಲ ಅಂಥ ಮಾನವತಿಯರ ಸಂಸಾರ ಸುಖದಿಂದ ಸಾಗ್ಯಾವ ಅಂತ ನೀವು ನಂಬತೀರಿ! ಹೆಣ್ತಿಯ ಮ್ಯಾಲ ಗಂಡ ಪ್ರೀತಿಮಾಡಲಿಲ್ಲ, ಅಥವಾ ಮದಿವಿಯ ಹೊರತಾಗಿ ಮತ್ತೇನು ಮಾಡಿದ, ಅಂದರೂ ನಿಮಗ ನಡೀತದ! ಅಂವ ಎರಡನೇ ಮದಿವೀ ಮಾತ್ರ ಮಾಡಿಕೊಳ್ಳ ಬಾರದು ಇಷ್ಟು ನಿಮ್ಮ ಬೇಡಿಕಿ! ಇದಕ್ಕಿಂತ ಜೀವಂತ ಬಲಿದಾನ ಎಷ್ಟೋವಾಲು ಬೇಕು. ಬಲಿಗಾಗಿ ತಂದಿರುವ ಪಶುವಿಗೆ, ಪ್ರಾಣಹೋಗುವ ಹೊತ್ತಿನಲ್ಲಿ ಕಿರುಚುವ ಸ್ವಾತಂತ್ರ್ಯವಾದರೂ ಇರ್ತದ. ಆದರ ತೋರಿಕೆಯ ಸಂಸಾರದ ಹೋಮಕುಂಡದಲ್ಲಿ ಆಹುತಿಯಾಗುವ ನಮ್ಮ ಹೆಂಗಸರು ಸ್ನಿಗ್ಧವಾಗಿ, ಉಜ್ವಲವಾಗಿ, ತಟತಟಕಾಗಿ, ಉರಿದು, ನಂದಿ ಹೋಗ್ತಾರ! ಪಾಪ! ಕೊನೀ ತಟಕು ತೀರುವವರೆಗೆ ಅವರ ಹೋಮ ನಿಲ್ಲುವದಿಲ್ಲ! ಬೇಬಿ, ನಿನ್ನ ಚಳವಳಿಯ ವಿಶೇಷ ಆವಶ್ಯಕತೆ ಯಾರಿಗಾದರೂ ಇದ್ದರ, ಅದು ಗಂಡಬಿಟ್ಟ ಹತಭಾಗಿನಿಯರಿಗಷ್ಟೇ ಅಲ್ಲ; ಭಾಗ್ಯವತಿಯರೆನಿಸಿಕೊಳ್ಳುವ ಈ ಗೃಹಲಕ್ಷ್ಮಿಯರಿಗೂ ಅದ!

**ಬೇಬಿ:—** ಮನೆಯಲ್ಲಿ ಅವರದೇನು ಇದ್ದರೂ, ಬಯಲಿಗೆ ಅವರ ಮರ್ಯಾದಿಗೇಡು ಆಗಿರೋದಿಲ್ಲ. ಪ್ರತ್ಯಕ್ಷವಾಗಿ ಅವರ ಸಂಸಾರ ಮುಳುಗಿರೋದಿಲ್ಲ, ಶ್ರೀಕಾಂತ.

**ಶ್ರೀಕಾಂತ:—**ಸಂಸಾರ! ಸಂಸಾರ! ಸಂಸಾರ! ಈ ಸಂಸಾರ ಎಷ್ಟೇ ಜೊಳ್ಳು, ನಿರ್ಜೀವ, ಪ್ರೇಮಹೀನವಾಗಿದ್ದರೂ ನಮಗ ನಡೀತದ, ಇದ್ದರ ಮುಗೀತು! ಎಲ್ಲಾ ನಮ್ಮ ಜೀವನದ

ಸಾರಸರ್ವಸ್ವನೇ ಇದಾಗಿ ಕೂತಂದ! ಬುನಾದಿ ಗಟ್ಟಿಲ್ಲದ ಭವ್ಯಮಂದಿರಗಳು, ಆಡಂಬರದ ಆರಾಸು, ಡಬಡ್ಡಾಳಿಕೆಯ ಪ್ರದರ್ಶನ, ಬಂಡ್ವಾಳಿಲ್ಲದ ಬಢಾಯಿ! ಅಲ್ಲs, ಏನಿರ್ತಾವs. ಬೇಬೀ, ನಿಮ್ಮ ಸಂಸಾರದ ಕಲ್ಪನಾ? ಜೋಗೇರಾಕಿಯ ಕಡಿಯಿಂದ ಜಿಕೇರಿಮಾಡಿ ಕೊಂಡ ನಾಲ್ಕು ಹಿತ್ತಾಳಿಯ ಡಬ್ಬಿಗಳನ್ನ ಜಳಜಳ ತಿಕ್ಕಿ ಜತಿಯಾಗಿ ಹಚ್ಚಿಡೋದು, ಸಂಕ್ರಮಣ ಬಂತು ಅಂದರ ಸರಿರಾತ್ರೀತನಕ ಆಕಳಿಸಿಕೋತ ಕುಸುರೆಳ್ಳು ಹಚ್ಚೋದು, ಬಿಸಿಲುವೇಶದಾಗಿದ್ದರೂ ತಲಿ ತಿರಗೋಹಾಂಗ ಸ್ವೆಟರ್ ಹೆಣಿಯೋದು, ಇಷ್ಟಾದರ ಮುಗೀತು ನಿಮ್ಮ ಸಂಸಾರ! ಜಗತ್ತಿನೊಳಗಿನ ಅರ್ಧ ಮಾನವ ಕೋಟಿಯ ಸಂಹಾರ ಆತ್ಯ. ಉಳಿದವ್ರಲ್ಲಿ ಮುಕ್ಕಾಲು ಪಾಲು ಜನಕ್ಕೆ ಮನುಷ್ಯತ್ವ ಉಳಿಸಿಕೊಂಡು ಬಾಳೋದು ಕೂಡ ಕಠಿಣ ಆತ್ಯ. ಆದರೂ ನಮ್ಮ ಹೆಂಗಸರ ಸಂಸಾರದ ಕಲ್ಪನಾ, ಸಾಲಾಗಿರಿಸಿದ ಹಿತ್ತಾಳೀ ಡಬ್ಬೀ ಹೊರಗ ಹೋಗ-ಲಿಲ್ಲ! ಬೇಬೀ, ನಿನ್ನಂಥ ಇಂದಿನ ಪೀಳಿಗೆಯ ಹುಡುಗಿಯ ರಾವರೂ ಸಂಸಾರದ ಈ ಕಲ್ಪನೆಗಳನ್ನ ಬದಲು ಮಾಡಲಿಕ್ಕ ಬೇಕು. ಸ್ವಂತದ ಸಂಸಾರದ ಜತಿಗೆ ಪರರ ಸಂಸಾರದ ಕಡೆಗೂ ಸಹಾನುಭೂತಿಯಿಂದ ನೋಡುವ ದೃಷ್ಟಿ ಇಡಬೇಕು. ಹೀಂಗ ನಮ್ಮ ಸಂಸಾರದ ಚತುಃಸೀಮೆಗಳನ್ನ ನಾವು ವಿಸ್ತಾರಗೊಳಿಸಲಿಕ್ಕೆ ಕಲಿಯದಿದ್ದರ ನಮ್ಮ ಚಳವಳಿಗೆ ಸಾರ್ಥಕ್ಯ ಇಲ್ಲ.

ಬೇಬಿ:— ನಿನ್ನ ಈ ತತ್ತ್ವಜ್ಞಾನ ಅವರಿಗೆ ಒಪ್ಪಿಗಾದೀತೇನು? ಈ ಮಾತನ್ನ ನೀನು ಅವರಿಗೂ ಹೇಳಿದರ ಸರಿ ಅಂದೇನು.

ಶ್ರೀಕಾಂತ:— ಹೇಳೀ ಹೇಳ್ತೀನಿ. ತನ್ನಂತೆ ಪರರನ್ನು ಬಗೆಯುವ, ಪರರ ದುಃಖದಲ್ಲಿಯೂ ಸಹಾನುಭೂತಿಯನ್ನು ತೋರುವ ಈ ತತ್ತ್ವ ಜ್ಞಾನ ಒಬ್ಬ ಹೆಣ್ಣುಮಗಳ ಮನಸ್ಸಿಗಾದರೂ ಒಪ್ಪಿಗಾದರ ಸಾಕು. ಈ ಉದ್ದೇಶಸಾಧನೆಯಲ್ಲಿ ನಾನು ಜಯಶಾಲಿ

ಯಾದರ, ನಿನ್ನಕಿಂತ ನಾನೇ ಹೆಚ್ಚು ಸ್ತ್ರೀಯರ ಕಾರ್ಯ ಮಾಡಿದೆ ಅಂತಾದೀತು. (ಗಂಟೆಯಾಗುತ್ತದೆ. ಅಪ್ಪಾರಾಯರು ಇಂದಿರಾಬಾಯಿಯವರು ಬರುತ್ತಾರೆ. ಬೇಬಿ ಮತ್ತು ಶ್ರೀಕಾಂತ ಅವರ ಕಣ್ಣಿಗೆ ಬೀಳುತ್ತಾರೆ.)

ಅಪ್ಪಾ:— ಆಂ! ಬೇಬಿ! ಶ್ರೀಕಾಂತ!

ಶ್ರೀಕಾಂತ:—ನೀವು ಬರ್ತೀರಿ ಅಂತ ಕೇಳಿದೆ. ಹಂಗಾರ ನಾವೂ ಹಾಜರ್ ಇರೋಣ—ಈ ಕುರುಕ್ಷೇತ್ರದ ವ್ಯಾಲಿ ಅಂತ ಬಂದೆ.

ಅಪ್ಪಾ:— ಅವರೆಲ್ಲಿದ್ದಾರ?

ಶ್ರೀಕಾಂತ:—ಒಳಗಿದ್ದಾರ, ಇದೀಗ ಬರ್ತಾರ. ಕೂಡ್ರಿಲ್ಲ ಕಾಕಾ.

ಅಪ್ಪಾ:— ಹೀಂಗs!

ಇಂದಿರಾ:— ಬೇಬಿ, ನೀ ಯಾಕ ಇಲ್ಲಿ ಬಂದಿ?

ಬೇಬಿ:— ಉಷಾತಾಯಿಗೆ ನಾನೂ ಏನಾದರೂ ಹೇಳಿನೋಡಬೇಕು ಅಂತ ಬಂದೆ.

ಅಪ್ಪಾ:— ಅದನ್ನ ಮಾಡಲಿಕ್ಕೆ ನಾಪಿದ್ದೀವಲ್ಲ ಇನ್ನೂ! (ಶ್ರೀಕಾಂತನಿಗೆ) ಹಂ, ಏನು ನಿರ್ಣಯ ಆಘಾಂಗಾತ್ಯು, ಶ್ರೀಕಾಂತ? ಬರ್ತs-ದೇನು ತಲಿ ಹಾದೀವ್ಯಾಲ?

ಶ್ರೀಕಾಂತ:—ತಲಿ? ಹಾದೀವ್ಯಾಲ? ಬರ್ತಿತ್ತು ಕಾಕಾ! ಆದರ ನೀವು ಬಂದು ಎಲ್ಲಾ ಘೋಟಾಳೆ ಮಾಡಿದಿರಿ. ನೀವು ಈಗ ಬರಽವರು ಅಂತ ನನಗ ಹೇಳಬಾರದು? ನಿಮುಗ ಎಷ್ಟೋ ಮಾತು ಮೊದಲಽ ತಿಳಿಸೋವಿದ್ದುವು.

ಅಪ್ಪಾ:— ನೀ ನನಗ ಹೇಳಿಕೊಡಬೇಕ? ಈ ವಯಸ್ಸಿನೊಳಗ ಇನ್ನ, ನಿನ್ನಿಂದ ನಾವು ಕಲಿಯೋ ಹೊತ್ತೂ ಬಂತು!

ಶ್ರೀಕಾಂತ:—(ಗಡಿಬಿಡಿಯಿಂದ) ಹಾಂಗಂತಲ್ಲ, ಕಾಕಾ. ಈ ಹುಡುಗಿ ಯಾರು ಗೊತ್ತದಯೇನು ನಿಮುಗ?

ಅಪ್ಪಾ:— ಅಂದರ ಯಾರು? ಹರಿಜನ, ಮುಸಲ್ಮಾನ್, ಕೆಂಪುಮೋತಿ ಮಡಮ್ಮs? ಇದ್ದಾಳsರೆ ಯಾರು?

ಶ್ರೀಕಾಂತ:—ಹಾಂಗsರೆ ಇದ್ದರ ಒಳ್ಳೇದಾಗತಿತ್ತು ಕಾಕಾ!

**ಅಪ್ಪಾ**:— ಅಂದರ? ಅವರಕಿಂತನೂ ಕಡಿ. (ಎದುರಿಗಿನ ತಂಬೂರಿ, ತಬಲಾ ಇವುಗಳ ಕಡೆಗೆ ಅರ್ಥಪೂರ್ಣ ದೃಷ್ಟಿಯಿಂದ ನೋಡುತ್ತ) ಯಾರು? ಇದ್ದಾಳಽರೆ ಯಾರು?

**ಶ್ರೀಕಾಂತ**:—ಹ್ಯಾಂಗ ಹೇಳಲಿ ನಿಮುಗ ಕಾಕಾ? ಆಕಿ....

**ಉಷಾ**:— (ಒಳಗಿನಿಂದ) ಶ್ರೀಕಾಂತ, ಬಂದರೇನ್ರಿ ಆ ಜನ?

**ಶ್ರೀಕಾಂತ**:—(ಹತಬದ್ಧನಾಗಿ) ಹೌದು, ಬಂದರು. ಬರ್ರಿ ಉಷಾತಾಯಿ.

(ಉಷಾ, ಈ ಮೊದಲು ವರ್ಣಿಸಿದ ತಾಯಿಯ ವೇಷದಲ್ಲಿ ಬರುವಳು. ಅವಳನ್ನು ನೋಡಿ ಅಪ್ಪಾರಾಯರು ಒಮ್ಮೆಲೆ ಬೆಚ್ಚಿ ಬೀಳುತ್ತಾರೆ. ಶ್ರೀಕಾಂತನೂ ಬೆರಗುಗೊಳ್ಳುತ್ತಾನೆ. ಇಂದಿರಾ-ಬಾಯಿ ಹಾಗು ಬೇಬಿಗೆ ಇದರ ಕಲ್ಪನೆಯೇ ಇಲ್ಲ.)

**ಅಪ್ಪಾ**:— (ಒಮ್ಮೆಲೆ) ಆಂಽಽ!

**ಬೇಬಿ**:— (ಮೆಲ್ಲಗೆ ತಾಯಿಗೆ) ಅವ್ವಾ, ಎಷ್ಟು, ಸಾದಾ ಕಾಣಸ್ತಾರಽ? ಅಲ್ಲಽ, ಹದಿನೆಂಟು ಮೊಳದ ಸೀರಿ, ಹಣಿಗೆ ಉದ್ದ ಕುಂಕುಮ ....

**ಶ್ರೀಕಾಂತ**:—(ಎಲ್ಲರ ಪರಿಚಯವನ್ನು ಉಷೆಗೆ ಮಾಡಿಕೊಡುತ್ತ) ಉಷಾತಾಯಿ, ಇವರು ಕಾಕಾ, ಕಕ್ಕಿ, ಬೇಬೀ.

**ಅಪ್ಪಾ**:— ಹುಂ, ಮತ್ತ ಇವರು ಉಷಾತಾಯಿ ಅಲ್ಲ? ಒಮ್ಮೆಲೆ ಏನೋ ಚಮತ್ಕಾರದ ಭಾಸಾಯ್ತು ನನಗ! ನಾ ಎಲ್ಲೋ ಹಿಂದಕ್ಕ ಇವರ್‍ನ ನೋಡಿಧಾಂಗನಿಸಿತು! ಹಾಂಗ ಒಬ್ಬರ್‍ಹಾಂಗ ಒಬ್ಬರು ಎಷ್ಟೋ ಜನ ಇರ್‍ತಾರ ಅನ್ನು!

**ಇಂದಿರಾ**:— (ಉಷೆಯ ಹತ್ತಿರ ಹೋಗಿ) ಕೂಡ್ರೆಲ್ಲ? ನಿಮ್ಮನ್ನ ಒಮ್ಮೆ ಕಾಣ ಬೇಕು ಅಂತ ಬಹಳ ಆಶೆಯಿತ್ತು.

**ಅಪ್ಪಾ**:— (ತುಸು ಆಢ್ಯತೆಯಿಂದ) ಈ ಮೊದಲಽ ನಾವು ನಿಮ್ಮನ್ನ ಕಾಣ ಬೇಕಾಗಿತ್ತು. ಆತ್ಯು, ಇವತ್ತ ಬಂದಿವಿ ಅಂತೇನು ದೊಡ್ಡ ತಪ್ಪಾಗಲಿಲ್ಲ. ಉಷಾತಾಯಿ! ನಾವು ನಿಮ್ಮ ಕಡೆಗೆ ಯಾಕ ಬಂದೀವಿ ಅನ್ನೋದರ ಕಾರಣ— ಚೈತನ್ಯರು ನಿಮ್ಮ ಕಿವೀಮ್ಯಾಲ ಈಗಾಗಲೇ ಇಟ್ಟಿರಬೇಕು. ಈ ವಿಷಯದಲ್ಲಿ

ನಿಮಗ ಬುದ್ಧೀ ಹೇಳೋ ಪ್ರಸಂಗ ನಮ್ಮ ಮ್ಯಾಲ ಬಂದದ್ದು ನಮ್ಮೆಲ್ಲರಿಗೂ ಬ್ಯಾಡಾದ ಮಾತs! ಆದರ ಪ್ರಸಂಗs ಬಂದsದ.

(ಉಷಾ ಸುಮ್ಮನೆ ಸಿಟ್ಟಿನಿಂದ ನೋಡುತ್ತಾಳೆ)

ಇಂದಿರಾ:— (ಗಂಡನಿಗೆ ಯಾಚನೆಯ ದನಿಯಲ್ಲಿ) ತಾವು ತುಸು ಶಾಂತರಾಗಿರ್ರಿ- (ಉಷಾನ ಕಡೆಗೆ ತಿರುಗಿ) ಉಷಾತಾಯಿ, ಹಡೆದವರ ಕರುಳು, ಕಣ್ಣಿನಿಂದ ನೋಡಿ ಸುಮ್ಮನೆ ಕೂಡೋದಾಗುವದಿಲ್ಲ, ಅಂತ ಬಂದಿವಿ. ತಾವು ಸಿಟ್ಟಾಗಬ್ಯಾಡರಿ ಆಂ!

ಅಪ್ಪಾ:— (ತುಸು ಹಾದಿಗೆ ಬಂದು) ಉಷಾತಾಯಿ, ನಮ್ಮಿಬ್ಬರಿಗೂ ನೀವು ಹೊಟ್ಟೇಮಗಳಿದ್ದಾಂಗ. ನಿಮ್ಮ ಸುಖಕ್ಕ ಅಡ್ಡಾಗಬೇಕು ಅಂತ ನಮಗ ಎಂದೂ ಅನಿಸುವ ಕಾರಣಿಲ್ಲ. ಆದರ ಯಾವದು ನಿಮ್ಮ ಸುಖಕ್ಕ ಕಾರಣಾಗೋದದ, ದುರ್ದೈವ ದಿಂದ ಅದೇ ನಮ್ಮ ಮಗಳ ಸುಖವನ್ನ ಹಾಳುಮಾಡೋದದ!

ಉಷಾ:— ಇಂಥ ಘಟನೆಗಳು ಒಮ್ಮೊಮ್ಮೆ ಸಂಭವಿಸತಿರ್ತಾವ··· ಪ್ರಪಂಚದ ಮ್ಯಾಲ.

ಬೇಬಿ:— ಅವು ತಾವs ಸಂಭವಿಸೋದಿಲ್ಲ, ಸಂಭವಿಸೋ ಹಾಂಗ ಮಾಡ ಲಾಗ್ತsದ.

ಇಂದಿರಾ:— ಬೇಬಿ, ನೀ ತುಸ ಸುಮ್ಮಗಿರಲ್ಲ!

ಉಷಾ:— ಇಲ್ಲ, ಅವರು ಹೇಳೋ ಮಾತು ಸರಿ ಅದ. ಅವು ತಾವs ಸಂಭವಿಸೋದಿಲ್ಲ, ಸಂಭವಿಸೋ ಹಾಂಗ ಮಾಡಲಾಗ್ತದ!

ಅಪ್ಪಾ:— ಮತ್ತ ಮನಸ್ಸುಮಾಡಿದರ ಅವನ್ನ ತಪ್ಪಿಸೋದೂ ಶಕ್ಯದ- ಉಷಾತಾಯಿ, ನಿಮ್ಮಂಥ ಸುಶಿಕ್ಷಿತ ಸ್ತ್ರೀಯರು ಇಂಥ ಘಟನೆಗಳಾಗೋದನ್ನ ತಪ್ಪಿಸಬಹುದಲ್ಲ?

ಉಷಾ:— ಹಿಂಗಂತೀರಿ?

ಅಪ್ಪಾ:— ಯಾವಾಗಲೂ! ಸುಶಿಕ್ಷಿತ ಸ್ತ್ರೀಯರೆಂತೂ ಈ ವಿಷಯವನ್ನ ಮೊದಲು ವಿಚಾರಮಾಡೋದು ತುಂಬ ಅಗತ್ಯ.

ಉಷಾ:— ಮತ್ತ ಸುಶಿಕ್ಷಿತ ಪುರುಷರು ಬ್ಯಾಡೇನು ವಿಚಾರ ಮಾಡಲಿಕ್ಕೆ?

**ಅಪ್ಪಾ :—** ಬ್ಯಾಡ ಯಾಕ? ಈ ಮಾತಿನಲ್ಲಿ ಪುರುಷರು ಕೂಡ ಮೋಷಿಗಳs....

**ಉಷಾ :—** ಹೌದಲ್ಲ? ಹಾಂಗಿದ್ದರ, ನನ್ನ ಬದಲಾಗಿ ನೀವು. ನಿಮ್ಮ ಅಳಿಯಂದಿರ್ನs ಯಾಕ ಕಾಣಬಾರದು?

**ಅಪ್ಪಾ :—** ಗಂಡಸು ಅಂದರ ಹಾಂಗ ತುಸು ಬೇಜವಾಬ್ದಾರನs ಇರ್ತಾನ. ಅವಕ್ಕಂತs ಹೆಂಗಸರು, ವಿಶೇಷವಾಗಿ ಸುಶಿಕ್ಷಿತ ಹೆಂಗಸರು..

**ಉಷಾ :—** ಆದರ ಶಿಕ್ಷಣಕ್ಕೂ ಪ್ರೇಮಕ್ಕೂ ಏನು ಸಂಬಂಧ? ನಾನು ಸುಶಿಕ್ಷಿತಳಿರದಿದ್ದರೂ ಇವನ್ನೇ— ಅಂದರ ಮದಿವಿಯನ್ನೇ ಮಾಡಿಕೊಳ್ತಿದ್ದೆ.

**ಅಪ್ಪಾ :—** ಆದರ ನೀವು ನಿಮ್ಮ ಪ್ರೇಮದ 'ಉಧೊ ಉಧೊ' ನಡಸಿ, ಇನ್ನೊಬ್ಬರ ಹಕ್ಕಿನ ಕಡೆಗೆ. ನ್ಯಾಯಾನ್ಯಾಯದ ಕಡೆಗೆ ದುರ್ಲಕ್ಷ ಮಾಡ್ತ ಇದ್ದೀರಿ.

**ಉಷಾ :—** (ಮುಖದಮೇಲೆ ಯಾವ ಭಾವನೆಗಳನ್ನೂ ತೋರಗೊಡದೆ) ಸಮಾಜದಲ್ಲಿ ಅನೇಕರು ಪ್ರೇಂಗವಾಡ್ತಾರ. ಅದರ ವಿಚಾರ ಮಾಡುವವರ್‍ಯಾರು, ಮತ್ತ ಅಂಥವರ್ನ ದಂಡಿಸುವವರ್‍ಯಾರು?

**ಬೇಬಿ :—** ಪರರು ಅನ್ಯಾಯಮಾಡ್ತಾರ ಅಂತ ತಮ್ಮ ಅನ್ಯಾಯ ಸಮರ್ಥನ ಮಾಡಿಕೊಳ್ಳಲಿಕ್ಕೆ ಬರಲಾರದು!

**ಉಷಾ :—** ಆದರ ನಾ ಅನ್ಯಾಯಮಾಡ್ತೇನಿ ಅಂತ ನನಗ ಅನಿಸೋದೇ ಇಲ್ಲ.

(ಶ್ರೀಕಾಂತ ಉಷೆಯ ಕಡೆಗೆ, 'ಇವನ್ನೇನು ಮಾತಾಡ್ತ ಇದ್ದೀರಿ?' ಎನ್ನುವ ದೃಷ್ಟಿಯಿಂದ ನೋಡುತ್ತಾನೆ.)

**ಅಪ್ಪಾ :—** ನೀವು ಅನ್ಯಾಯ ಮಾಡ್ತ ಇದ್ದೀರಿ, ಪರರ ಹಕ್ಕಿನಮೇಲೆ ಆಕ್ರಮಣ ಮಾಡ್ತ ಇದ್ದೀರಿ ಅಂತ ನಿಮಗ ಅನಿಸೋದೇ ಇಲ್ಲ? ಆಶ್ಚರ್ಯ!

**ಉಷಾ :—** ಆಶ್ಚರ್ಯ ಅನಸ್ತದ ನಿಮಗ? ನ್ಯಾಯಾನ್ಯಾಯದ ಮತ್ತ ಇನ್ನೊಬ್ಬರ ಹಕ್ಕಿನ ವಿಚಾರದಲ್ಲಿ ತಮ್ಮ ಅಭಿಪ್ರಾಯಗಳು ಇತ್ತೀಚೆಗೇ ತುಂಬ ಸೂಕ್ಷ್ಮ್ಮಕ್ಕಿಳಿದಂತೆ ಕಾಣಸ್ತಾವ.

ಇಪ್ಪತ್ತೈದು ವರ್ಷದ ಹಿಂದೆ ತಮ್ಮ ವಿಚಾರಗಳು ಹೀಂಗಿರ ಲಿಲ್ಲ. ಅಲ್ಲs?

ಅಪ್ಪಾ — ಉಷಾತಾಯಿ, ಬಹಳಮಾಡಿ ಇಪ್ಪತ್ತೈದು ವರ್ಷದ ಹಿಂದಿನ ನನ್ನ ಲಗ್ನದ ಸಮಾಚಾರ ...! (ಗೊಂದಲಗೆಡುವರು.)

ಉಷಾ — (ಗಂಭೀರಭಾವದಲ್ಲಿ) ಹೌದು. ಒಬ್ಬ ಹಂಡತಿ ಬದುಕಿರುವಾಗ, ನೀವು ಮಾಡಿಕೊಂಡ ಎರಡನೆಯ ಮದಿವಿಯ ಸಮಾಚಾರ ನನಗೊತ್ತದ!

ತೇಜಿ — ದಾದಾ, ಇವರೇನು ಹೇಳ್ತಾರ? ನಮ್ಮ ತಾಯಿಯ ಮದಿವಿ ಸವತೀವ್ಯಾಲ ಆತ್ಯ?

ಶ್ರೀಕಾಂತ —ನಿನಗ ಮನೀಗೆ ಹೋಗಲಿಕ್ಕೆ ಹೇಳ್ತಿದ್ದೆ. ನೀ ಕೇಳಲಿಲ್ಲ. ಇನ್ನ ಬಾಯಿ ಮುಚ್ಚಿಕೊಂಡು ಸುಮ್ಮಗಿರು. ಇದಕ್ಕೂ ಹೆಚ್ಚಿನ ಸಂಗತಿ ನಿನಗಿನ್ನೂ ತಿಳಿಯೋದವ!

ಅಪ್ಪಾ.— ನಾ ಯಾವಾಗ ಮದಿವೀ ಮಾಡಿಕೊಂಡೆ, ಆಗ ಹಾಂಗs ಕಾರಣಾನೂ ಇದ್ದವು.

ಉಷಾ — ಇರಬಹುದಲ್ಲ! ತಮಗ ಹಂಡತಿ ಸೇರದ ಇರೋದು, ತಮ್ಮ ತಾಯಿ ಅದಕ್ಕ ಪುಟಕೊಡೋದು ಇವಂತೂ ಆ ಕಾಲದ ಬಹಳ ಮಹತ್ವದ ಕಾರಣಗಳು!

ಅಪ್ಪಾ:— ಅದಷ್ಟೇ ಅಲ್ಲ, ತಾಯಿಗೆ ನಾ ಒಬ್ಬನೇ ಮಗ. ಆಕಿಗೆ ವಂಶವೃದ್ಧಿಯ ಅಭಿಲಾಷೆ ಇರೋದು ಸ್ವಾಭಾವಿಕ. ಮತ್ತ ಅವಳ ಅಭಿಲಾಷೆಗೆ ಮರ್ಯಾದಿ ಕೊಡೋದು ನನ್ನ ಕರ್ತವ್ಯ ಇತ್ತು. ಮದಿವ್ಯಾಗಿ ಎಷ್ಟೋ ವರ್ಷಗಳಾದರೂ ನನ್ನ ಮೊದಲನೆ ಹೆಂಡತಿಗೆ ಮಕ್ಕಳಾಗಲಿಲ್ಲ.

ಉಷಾ:— ಮತ್ತ ಅದರ ನೆವಮಾಡಿಕೊಂಡು, ನೀವು ನಿಮ್ಮ ಮನಸ್ಸಿನ ಬಯಕಿ ಪೂರೈಸಿಕೊಂಡಿರಿ. ಅದು ಮಕ್ಕಳ ಸಲುವಾಗೇ ಕೇವಲ ಅಲ್ಲ!

ಅಪ್ಪಾ:— ಈರೀತಿ ನೀವು ತರ್ಕಮಾಡುವದು ನಿಮ್ಮ ಅನುಕೂಲದ್ದಿರ ಬಹುದು— ಅಂತ ನಾ ಯಾಕ ಅನಬಾರದು?

ಇಂದಿರಾ:— ನಿಷ್ಕಾರಣವಾಗಿ ಈ ಮಾತಿನ ಅರೆದಾಟಯಾಕ?

**ಅಪ್ಪಾ:—** ತಡಿ ಸ್ವಲ್ಪ. ಉಷಾತಾಯಿ, ನಾನು ಎರಡನೇ ಮದಿವಿ ಯಾದದ್ದು ಕೇವಲ ಮಕ್ಕಳ ಸಲುವಾಗಿಯೇ ಅಲ್ಲ, ಬೇರೆ ಕಾರಣಕ್ಕಾಗಿ ಎಂದು ನೀವನ್ನುವದು ಸರಿ ಅಲ್ಲ.

**ಉಷಾ:—** ಅಲ್ಲದೆ ಏನು? ಅವಳಿಗೆ ಮಕ್ಕಳಾಗೋದು ಶಕ್ಯ ಇಲ್ಲ ಅಂತ ನೀವು ಖಾತ್ರೀಮಾಡಿಕೊಂಡಿರೇನು? ಮಾಡಿಕೊಳ್ಳಲಿಲ್ಲ. ಬಹಳ ದಿವಸ ಅವಳಿಗೆ ಮಕ್ಕಳಾಗಲಿಲ್ಲ ಅಂತ ಮುಂದೆ ಕೂಡ ಆಗಲಿಕ್ಕಿಲ್ಲ ಹಿಂಗ ನೀವು ನಿಮ್ಮ ಸ್ವಾರ್ಥಕ್ಕಾಗಿ ನಿರ್ಧಾರಮಾಡಿ ಕೊಂಡು, ಅವಳ ಸ್ತ್ರೀತ್ವದ ಅಪಮಾನ ಮಾಡಿದಿರಿ. ಎರಡನೆ ಸ್ತ್ರೀಯಳ್ನ ಮದಿವೆಯಾದಿರಿ.

**ಅಪ್ಪಾ:—** ಅದರಲ್ಲಿ ಅಪಮಾನ ಏನು? ಎಷ್ಟೋ ಹೆಂಗಸರಿಗೆ ಮಕ್ಕಳಾ-ಗೋದಿಲ್ಲ.

**ಉಷಾ:—** ಆದರ ಹೆಂಗಸರಿಗೆ ಅದರ ಬಗ್ಗೆ ಏನನಿಸ್ತಿರ್ತದ ಅದನ್ನೆಂದಾ ದರೂ ಕಲ್ಪಿಸಿಕೊಂಡೀರೇನು? ಆ ಕಲ್ಪನಾ ನಿಮಗಿದ್ದರ, ಮಕ್ಕಳ ಸುಖಕ್ಕಾಗಿ ಹಾತೊರೆಯುವ ಅವಳ ನೊಂದ ಜೀವದ ಮ್ಯಾಲ ಹೆಚ್ಚಿನ ಮಮತೆಯನ್ನು ತೋರಿ, ಅವಳನ್ನು ಇನ್ನಷ್ಟು ಹತ್ತರ ಇಡುತ್ತಿದ್ದಿರಿ. ಅಜ್ಜಿಗೆ ಇರುವ ಮೊಮ್ಮಕ್ಕಳ ಬಯಕೆಗಿಂತ ನಿಮ್ಮ ಹೆಂಡತಿಗೆ ಇರುವ ಅಪತ್ಯದ ಬಯಕೆ ಹೆಚ್ಚಿನದಾಗಿತ್ತು. ಈ ಅವಳ ದುಃಖದಲ್ಲಿ ಸಹಭಾಗಿಗಳಾಗು ವದರ ಬದಲಾಗಿ, ಏಕಾಕಿಯಾಗಿ ತಳಮಳಿಸಲು ಅವಳ ಪಾಡಿಗೆ ಅವಳನ್ನು ಬಿಟ್ಟು, ನೀವು ಮಾತ್ರ ನಿರಂಬಳಾದಿರಿ. ಅವಳ ಬದಲಾಗಿ ನಿಮ್ಮ ಮ್ಯಾಲ ಏನಾದರೂ ದೈವೀಕೋಪ ಉಂಟಾಗಿ ನಿಮಗ ಹುಚ್ಚು ಹಿಡಿದಿದ್ದರ, ತನ್ನ ಜೀವದ ಪರಿವಿಲ್ಲದ ಅವಳು ನಿಮ್ಮ ಸೇವಾ ಮಾಡಬಹುದಾಗಿತ್ತು; ನಿಮ್ಮ ಕಣ್ಣು ಹೋಗಿದ್ದರ ನಿಮ್ಮ ಕೈಯೊಳಗಿನ ಕೋಲಾಗಿ ನಿಮ್ಮನ್ನ ನಡಸಬಹುದಾಗಿತ್ತು. ನೀವು ಭಿಕಾರಿಯಾಗಿದ್ದರ, ನಿಮ್ಮ ಜತಿಗೆ ಬೀದಿಬೀದಿ ತಿರುಗುವದಕ್ಕೂ ಅವಳು ತಯಾ-ರಾಗಬಹುದಾಗಿತ್ತು!

ಇಂದಿರಾ:— (ಇದನ್ನು ಕೇಳುವದು ಸಹನವಾಗದೆ) ಕೇಳಲಾರೆ! ಬ್ಯಾಡ ಉಷಾತಾಯಿ. ಸಾಕುಮಾಡು.

ಉಷಾ:— ಯಾಕಂತ ಸಾಕುಮಾಡೋದು? ಇವರು ನನ್ನ ತಾಯಿಗೆ ತಮ್ಮ ಸೇವಾ ಮಾಡೋ ಭಾಗ್ಯಸಹಿತ ಲಭಿಸಗೊಡಲಿಲ್ಲ!

ಇಂದಿರಾ:— ಅಂದರ, ಉಷಾತಾಯಿ....

ಅಪ್ಪಾ:— (ಒಮ್ಮೆಲೆ ಚಕಿತರಾಗಿ) 'ನನ್ನ ತಾಯಿಗೆ'? ಏನಂದಿರಿ?

ಉಷಾ:— ಹೌದು, ನನ್ನ ತಾಯಿಗೆ. ಅಪ್ಪಾ, ಮಕ್ಕಳಾಗುವದಿಲ್ಲ ಅಂತ ಯಾರನ್ನ ನೀವು ಹೊರದೂಡಿದಿರಿ, ಆಕೆಯ ಮಗಳೇ ನಾನು!

ಅಪ್ಪಾ:— ಆಕೆಯ ಮಗಳು? ಇದು ಹ್ಯಾಂಗ ಶಕ್ಯ ಅದ?

ಉಷಾ:— ಅದ. ಶಕ್ಯ ಅದ, ಅಷ್ಟೇ ಅಲ್ಲ. ಸಂಪೂರ್ಣ ಸತ್ಯ ಅದ! ನೀವು ಎರಡನೇ ಮದಿವ್ಯಾದಿರಿ ಅಂತ ತಾಯಿ ದುಃಖದಿಂದ ಹುಚ್ಚಳಾಗಿ ಬ್ರಹ್ಮದೇಶದಲ್ಲಿರೋ ತನ್ನ ಅಣ್ಣನ ಕಡಿಗೆ ಹೋದಳು, ಮತ್ತ ಅಲ್ಲಿಗೆ ಹೋದಮ್ಯಾಲ ಆರೇಳು ತಿಂಗಳಲ್ಲಿಯೋ ನನ್ನ ಜನ್ಮ ಆತ್ಯು!

ಅಪ್ಪಾ:— (ಇನ್ನಷ್ಟು ಗೊಂದಲಗೆಟ್ಟು) ಅಂತಽ ನನಗ ಆಗಲೆ ಹಾಂಗ ಭಾಸಾತ್ಯು! ತೀರ ಅವಳ್ನ ನೋಡಿದಂತೇ ಅನಿಸಿತು!

ಇಂದಿರಾ:— (ಚಟ್ಟನೆ ಎದ್ದು ಉಷೆಯ ಹತ್ತಿರ ಹೋಗಿ) ಉಷಾತಾಯಿ, ನೀನು ಅವರ ಮಗಳು? (ಮುಂದೆ ಏನೂ ತೋಚದೆ ಹಾಗೇ ಸ್ತಂಭಿತರಾಗಿ ನಿಲ್ಲುವರು.)

ಉಷಾ:— ಹೌದು, ನಾನು ಅವರ ಮಗಳು. ಮತ್ತ ರೂಪದೊಳಗ ಹ್ಯಾಂಗ ತಾಯಿನ್ನ ಹೋತೀನಿ, ಗುಣದೊಳಗ ಹಾಂಗ ತಂದೀನ್ನ ಹೋತೀನಿ. ಆದ್ದರಿಂದ ನನ್ನ ಮದಿವಿ ನನ್ನ ಮನಸ್ಸಿನಂತೆ ಆಗಬೇಕು ಅಂತ ನನ್ನ ಹಟ ಅದ. ಅಪ್ಪಾ, ನೀವು ಹ್ಯಾಂಗ ಸಂತಾನದ ಸಲುವಾಗಿ ಮದಿವ್ಯಾದಿರಿ, ಹಾಂಗ ನಾನು ಪ್ರೇಮಕ್ಕಾಗಿ ಆಗ್ತೀನಿ, ಮತ್ತ ಆಗೇ ತೀರ್ತೀನಿ! ನನ್ನ ತಾಯಿಯ ಸುಖದ ಪರಿವಿ ನಿಮಗಿರಲಿಲ್ಲ,

ಂದವನ್ಯಾಲ ನಿಮ್ಮ ಮಗಳ ಸುಖದ ಪರಿವಿ ನನಗಾದರೂ ಯಾಕಿರಬೇಕು ?

**ಇಂದಿರಾ :—** (ದೈನ್ಯವಾಣಿಯಿಂದ) ಉಷಾತಾಯಿ‥‥‥(ಕಣ್ಣೊರಸುವರು.)

ಬೇಬಿ :— ಅಪ್ಪಾ, ವಸಂತರಾಯನ್ನ ನೀವು ಮದಿವ್ಯಾಗ ಬ್ಯಾಡಿರಿ ಅಂತ ಇವರಿಗೆ ಹೇಳಲಿಕ್ಕೆ ಇನ್ನ ನಮಗ ಮಾರಿ ಎಲ್ಲ್ಯದ?

**ಉಷಾ :—** ಅಪ್ಪಾ, ನನ್ನನಕ್ಕಲ್ಲ, ನಿಮ್ಮ ಅಚ್ಚ್ಯಾದ ಮಗಳೆತ್ತಿದ ಈ ಸವಾಲಿಗೆ ಉತ್ತರಾ ಕೊಡಿರಿ. ನಿಮ್ಮ ಇಂಥ ನ್ಯಾಯಾ-ನ್ಯಾಯದ ಅಭಿಪ್ರಾಯಕ್ಕ ನಾಯಾಕ ಬೆಲೀ ಕೊಡಬೇಕು ನೀವು ಹೇಳ್ರಿ? ನನ್ನ ತಾಯಿ (ದುಃಖ ಉಮ್ಮಳಿಸಿ) ಸ್ವಭಾವ ದಿಂದ ಭೋಳೆ ಇದ್ದಿದ್ದಾಳು, ಶರೀರದಿಂದ ದುರ್ಬಲಳಿದ್ದಿ-ದ್ದಾಳು! ಆದರೂ ಆಕಿ ಒಬ್ಬ ಸ್ತ್ರೀ ಇದ್ದಳು. ನಿಮ್ಮ ಅಕ್ಕೊ ನಷ್ಟೇ ಸಂಸಾರಮಾಡುವ, ತಾಯಿಯಾಗುವ ಹಕ್ಕು ಅವಳನೂ ಇತ್ತು. ಈ ಅವಳ ಹಕ್ಕನ್ನು ನೀವು ಅನ್ಯಾಯ ದಿಂದ ಅಪಹರಿಸಿದಿರಿ. ಆದರ ಪರಮೇಶ್ವರನದೇ ದಯ, ಅವಳ ತಾಯ್ತನವನ್ನು ಅಪಹರಿಸಲಿಕ್ಕೆ ಮಾತ್ರ ನಿಮಗ ಆಗಲಿಲ್ಲ! (ಇಂದಿರಾಬಾಯಿಯ ಕಡೆಗೆ ತಿರುಗಿ) ಇಂದಿರಾಬಾಯಿ, ನೀವು ನನ್ನ ತಾಯಿಯ ಹಕ್ಕಿನ ವಸ್ತುವನ್ನ ಹರಣಮಾಡಿದಿರಿ. ನಿಮಗ ಯಾವ ನ್ಯಾಯ ಅನ್ವಯಿಸ್ತದ, ಅದನ್ನೇ ನನಗ ಅನ್ವಯಿಸಿ ನೋಡಿರಿ. ಅಪ್ಪಾ, ನನ್ನ ತಾಯಿಯ ಮಾನಸಿಕ ಯಾತನೆಗಳ ಕಲ್ಪನೆ ನಿಮಗೆಂದಾದರೂ ಬಂತೆ? ಇಡಿಯ ತನ್ನ ಆಯುಷ್ಯದಲ್ಲಿ ಪ್ರಸನ್ನಮನಸ್ಸಿನಿಂದ ಅವಳು ನಕ್ಕದ್ದನ್ನು ನಾನೆಂದೂ ಕಾಣಲಿಲ್ಲ. ನಿಮ್ಮ ಮಗಳ ಸುಖ ಕ್ಕಾಗಿ ನನ್ನ ಕಡೆಗೆ ಬಂದು ಪ್ರಯತ್ನಮಾಡೋದಕ್ಕಾದರೂ ನಿಮಗ ಆಸ್ಪದ ಸಿಕ್ಕಿತು. ಆದರ ಪಾಪ ನನ್ನ ಅಜ್ಜ–ಅಜ್ಜಿ! ಯಾವದಕ್ಕೂ ಅವರಿಗೆ ಅವಕಾಶಸಿಗದೆ, ಒಮ್ಮೆಲೇ ಅವರಿಗೆ ತಿಳಿಯಿತು—ನೀವು ಎರಡನೇ ಮದಿವಿ ಮಾಡಿಕೊಂಡಿರಿ ಅಂತ! ನನ್ನ ತಾಯಿಯನ್ನ ತವರುಮನಿಗೆ ಅಟ್ಟಿ, ನೀವು ಹೊಸ

ಸಂಸಾರ ಹೂಡಿದಿರಿ ಅಂತ! ಮುಂದ, ನಾನು ಸಣ್ಣಾಕಿದ್ದೆ. ಎರಡನೇ ಹೆಣ್ಣು ಹುಡುಗಿಯರಿಗೆ ತಂದಿ ಇದ್ದರು. ನಾ ಕೇಳಿದೆ. 'ಅಜ್ಜಿ, ನನ್ನ ತಂದಿ ಎಲ್ಲಿದ್ದಾರ?' ಅಜ್ಜಿ ಸಂತಾಪದಿಂದ ಅಂದ್ಲು 'ನಿನ್ನ ತಂದಿ ಸತ್ತುಹೋಗ್ಯಾರ'. ನಾ ಕೇಳಿದೆ, 'ಹಂಗಾರ, ಅವ್ವ ಕುಂಕುಮ ಯಾಕ ಹಚ್ಚತಾಳ?' ಅವ್ವಗ ಸಿಟ್ಟು ಬಂತು, ಆ ಭರದಾಗ ಅವ್ವ ಕುಂಕುಮ ಒರಸಿಕೊಂಡುಬಿಟ್ಟಳು! ಅಪ್ಪಾ, ನನ್ನ ದೃಷ್ಟಿಗೆ ಕುಂಕುಮದ್ದು ಮಹತ್ತ್ವ ಅಲ್ಲ, ಎರಡು ದುಡ್ಡಿಗೆ ಭರಣಿ ತುಂಬ ಸಿಗೋ ಕೆಂಪುಬಣ್ಣದ ಪುಡಿ! ಸೌಂದರ್ಯ ಪ್ರಸಾಧನ ಸಾಹಿತ್ಯದೊಳಗಿನ ಕವಡಿ ಕಿಮ್ಮತ್ತಿನ ವಸ್ತು! ಆದರ ನನ್ನ ಅಜ್ಜಿಯ ದೃಷ್ಟಿಗೆ ಕುಂಕುಮ ಅಂದರ, ಸೌಭಾಗ್ಯದ ಸಾರ್ವ-ಭೌಮ ಚಿಹ್ನವಾಗಿತ್ತು. ನಿಂತು ಕುಂಕುಮ ಹಚ್ಚಿಕೊಂಡದ್ದು ಕೂಡ ನಮ್ಮ ಅಜ್ಜಿಗೆ ಸಹನಾಗ್ತಿರಲಿಲ್ಲ. ಇಷ್ಟೊಂದು ಪ್ರತಿಷ್ಠಾ ಆ ಕಾಲದಲ್ಲಿ ಆ ಕುಂಕುಮಕ್ಕ! ಅಂಥ ಕುಂಕುಮ, ಅವ್ವ ಒರಸಿಬಿಟ್ಟಳು. ಅವ್ವನ ಆ ಹಾಳುಹಣಿ ಅಜ್ಜಿ ಕಣ್ಣಿನಿಂದ ನೋಡಿದಳು. ಆ ದುಃಖಭಾರದಿಂದಲೇ ಅಜ್ಜ-ಅಜ್ಜಿಯರಿಗೆ ಲಗು ಮುಪ್ಪು ಬಂದು, ಅವರು ತುಸುದಿವಸದಲ್ಲೇ ಮರಣಕ್ಕ ತುತ್ತಾದರು. ಅವರ ಮರಣದ ದುಃಖ ತಾಯಿಯನ್ನೂ ಜಡ್ಡಿಗೆ ಕೆಡವಿತು. ಆದರ ಸಾಯೋವರೆಗೂ ಆಕಿಗೆ ಒಂದೇ ಧ್ಯಾನ—'ನನ್ನ ಉಷಾನ ಲಗ್ನ ಹ್ಯಾಂಗಾದೀತು?' 'ಆಕೀಗೆ ಸುಖ ಆದೀತss?' ಆಕಿ ಅನ್ನುವಾಕಿ—'ಅವ್ವಾ, ಲಗ್ನ ಅಂದರ ಒಂದು ಜೂಜಿದ್ಧಾಂಗವ್ವಾ' ಅಂತ. ಪಾಪ ಆ ಜೂಜಿನಲ್ಲೇ ಆಕಿ ಸೋತಳು; (ಇಂದಿರಾಬಾಯಿಗೆ) ನೀವು ಗೆದ್ದಿರಿ.

**ಇಂದಿರಾ:—** ಬ್ಯಾಡ, ಉಷಾತಾಯಿ, ಇದನ್ನ ಆಡೋದು ಬ್ಯಾಡ.

**ಉಷಾ:—** (ಅದನ್ನು ದುರ್ಲಕ್ಷ್ಯಿಸಿ ಅಪ್ಪಾರಾಯರಿಗೆ) ಈಗ ಈ ಲಗ್ನದ ಜೂಜಿನಲ್ಲಿ ನಿಮ್ಮ ಕಿಶೋರಕ್ಕ ಸೋಲುವಾಕಿ ಇದ್ದಾಳ; ನಾ

ಗೆಲ್ಲುವಾಕಿದ್ದೀನಿ! ಅಪ್ಪಾ, ನೀವು ಅವಿಚಾರದಿಂದ ಮಾಡಿಕೊಂಡ ಮದಿವಿಯಿಂದ ನನ್ನ ತಾಯಿಯ ಸಂಸಾರವೊಂದನ್ನs ಮುಳುಗಿಸಲಿಲ್ಲ, ನಿಮ್ಮ ಪ್ರೀತಿಯ ಮಗಳ ಸಂಸಾರವನ್ನೂ ಮುಳುಗಿಸಿದಿರಿ. ನಿಮ್ಮ ಮಗಳ ದುಃಖಕ್ಕ ಕಾರಣ ನಾ ಅಲ್ಲ; ನೀವು! ಸದ್ಯಕ್ಕ ಆ ನಿಮ್ಮ ಮಗಳು ತವರಮನಿಗೆ ಬಂದಾಳಲ್ಲ? ಇನ್ನ ಅವಳು ನಿಮ್ಮ ಕಡೆಗೇ ಇರಲಿ. ಅವರ್ನ ಬಿಡಿಸಿ, ಆ ಸಂಸಾರ ಇನ್ನ ಮುಂದ ನಾ ನಡಸ್ತೀನಿ. ನನ್ನ ತಾಯಿಯ ಮ್ಯಾಲ ನೀವು ಮಾಡಿದ ಅನ್ಯಾಯದ ಸೇಡಿದು!

(ಒಮ್ಮೆಲೆ ಒಳಗೆ ಹೋಗುತ್ತಾಳೆ. ಇಂದಿರಾಬಾಯಿ ಅವಳ ಬೆನ್ನಹಿಂದೆ ಹೋಗಿ 'ಉಷಾ' ಎಂದು ಕರೆಯುತ್ತಾರೆ. ಅವಳು ಹಾಗೇ ಹೋಗುತ್ತಾಳೆ. ಅವಳು ಹೋದಮೇಲೆ ಕೆಲವು ಕ್ಷಣ ಎಲ್ಲರೂ ಮುಂದುಗಾಣದೆ ಸುಮ್ಮಗಿರುತ್ತಾರೆ. ಕೊನೆಗೆ ಅಪ್ಪಾರಾಯರು ಸಾವರಿಸಿಕೊಂಡು)

ಅಪ್ಪಾ:— (ಇಂದಿರಾಬಾಯಿಯವರನ್ನುದ್ದೇಶಿಸಿ) ಯಾಕ ಆ ಉರ್ಮಟ ಹುಡುಗಿಯ ಬೆನ್ನು ಹತ್ತತೀರಿ? ಇಂಥ ಈ ಹುಡುಗಿ ನಮ್ಮ ಮಗಳು? ಪ್ರತ್ಯಕ್ಷ ಹಡೆದ ತಂದೀ ಜತಿಗೆ ಆಡೋ ಮಾತಿನ— ಇದು ರೀತಿ. ಒಟ್ಟs ಎಲ್ಲಾ ಮೂರ್ಖತನ. ಸವತೀಮ್ಯಾಲ ಮದಿವ್ಯಾಗೋ ಸೋಸು ತನಗಿದ್ದರ, ಬ್ಯಾರೆ ಯಾವನ್ನಾದರೂ ಮದಿವ್ಯಾಗು ಅಂತ ಹೇಳ್ರಿ, ಆದರ ಪ್ರತ್ಯಕ್ಷ ಅಕ್ಕನ ಗಂಡನ ಜತಿಗೆ ಲಗ್ನ? (ಶ್ರೀಕಾಂತ ಮುಗುಳುನಗೆ ನಗುತ್ತಾನೆ.) ಮತ್ತ ಆ ವಸಂತ, ಅವ ಆದರೂ ತಲಿ ಸಮ ಇಟುಗೊಂಡು ಇದ್ದಾನೊ?

ಬೇಬಿ:— ಅಪ್ಪಾ, ನೀವಾದರೂ ವಸಂತರಾಯಗ ಯಾವ ಬಾಯಿಲೆ ಹೀಂಗ ಅಂತೀರಿ?

ಅಪ್ಪಾ:— ಹುಂ! ಈಗ ನಿನಗ ಆ ವಸಂತನ ಮ್ಯಾಲ ಕಳಕಳಿ ಹುಟ್ಟಿತೇನು? ಠೀಕದs! ಅವನ ಮ್ಯಾಲ ಇನ್ನ ನೀ ಪ್ರೇಮ ಮಾಡಲಿಕ್ಕೆ ಸುರುಮಾಡು! ನಾಲ್ಕು ದಿವಸದಾಗ ಆ ಲಫಂಗ

ಈಕೀಗೂ ಬ್ಯಾಸತ್ತ ಅಂದರ, ನೀ ಹೊಡಿಸಿಬಿಡು ಅವನ ಸಂಗತಿ ಮೂರನೇ ಲಗ್ನ! ನೀವೆಲ್ಲರೂ ನ್ಯಾಯಸ್ಥರಲ್ಲs?

ಬೇಬಿ:— ಹಾಂಗಲ್ಲಪ್ಪಾ! ವಸಂತರಾಯನ ಮಾತು ಬಿಡ್ರಿ, ಉಷಾ-ತಾಯಿಗೆ ಅನ್ಯಾಯಾದರ, ಅವರಾದರೂ ಯಾಕ ಸೇಡು ತೀರಿಸಿಗೋಬಾರದು?

ಅಪ್ಪಾ:— ಅಲ್ಲs, ಸೇಡೇನು ಬಂತು? ಆಕಿಗೆ ತನ್ನ ಪ್ರೇಮುದ ಹವ್ಯಾಸ ಪೂರಯಿಸಿಗೋಬೇಕಾಗೇದ. ಅದಕ್ಕ ಆಯಿತs ಈ ಸೇಡಿನ ನೆವ ಸಿಕ್ಕಿತಷ್ಟs! ಮೂರ್ಖ ಮುಂಡೇದು!

ಶ್ರೀಕಾಂತ:— ಏನs ಆದರೂ, ಆಕಿಯ ಅನ್ನೋಣ ಸುಳ್ಳದ ಏನು, ಕಾಕಾ?

ಅಪ್ಪಾ:— ಸಾಕುಮಾಡಿರಿ ಇನ್ನ ಈ ಖರೆ–ಸುಳ್ಳಿನ ಅರೆದಾಟ. ನಮಗ ಒಟ್ಟs ಇದನ್ನೆಲ್ಲ ನೋಡಿ ಹೇಸಿಗಿ ಬಂದsದ! ಇಂಥ ಅಮ-ರ್ಯಾದೀ ಸಹನಮಾಡೋದಕ್ಕಿಂತ, ಅಕ್ಕ್ಯಾಗ ಸವತಿ ಬಂದದ್ದು ಸಾವಿರಪಾಲು ಮೇಲು. ಯಾಕ್ರಿ? (ಇಂದಿರಾ-ಬಾಯಿ ಸ್ತಬ್ಧರಾಗಿರುವುದನ್ನು ನೋಡಿ) 'ಏ ಶ್ರೀಕಾಂತ, ಇನ್ನ ಇಲ್ಲೆ ಒಂದು ಕ್ಷಣ ಸಹ ನಿಲ್ಲೋಹಾಂಗಿಲ್ಲ. ಆಕೀಗೆ ಹೇಳು—'ನೀನು ಮತ್ತ ಆ ವಸಂತ ಇನ್ನ ಬೇಕಾದ ಗೊಂದಲ ಹಾಕ್ಕೊಳ್ರಿ; ನಿನಗೂ ನಮಗೂ ಇನ್ನಮುಂದ ಯಾವ ಸಂಬಂಧನೂ ಇಲ್ಲ' ಅಂತ! ನಡೀ ಬೇಬಿ.

ಬೇಬಿ:— ಅಪ್ಪಾ, ಮತ್ತ....

ಅಪ್ಪಾ:— ನಡಿ ಅಂತೀನಿ, ನಿನಗೇನು ಭಾಷಣಾ ಮಾಡೋದದ, ಅದನ್ನ ಮನೀಗೆ ಹೋದಮ್ಯಾಲ ಮಾಡು. ಎಲ್ಲಾರೂ ನಡೀರಿ.

(ಬೇಬಿ ಹೊರಡುತ್ತಾಳೆ. ಇಂದಿರಾಬಾಯಿ ಹಾಗೇ ಕೂತಿರುತ್ತಾರೆ. ಅಪ್ಪಾರಾಯರು ಬಾಗಿಲವರೆಗೆ ಹೋಗಿ ಮತ್ತೆ ತಿರುಗಿ) ನಡೀರೆಲ್ಲ!

ಇಂದಿರಾ:— (ನಿಧಾನವಾಗಿ) ನೀವು ಹೋಗಿರಿ, ನನಗ ಇಲ್ಲಿ ಇರಬೇಕಾಗೇದ.

ಅಪ್ಪಾ:— (ಸಂತಾಪ ಮತ್ತು ಆಶ್ಚರ್ಯದೊಡನೆ) ಈಗ ಆದ ಅಗೌರವ ಸಾಕಾಗಲಿಲ್ಲೇನು ನಿಮಗ?

**ಇಂದಿರಾ:—** ಅಗೌರವವೇನು ಬಂತು? ಆಕ್ಯಾದರೂ ನಮ್ಮ ಮಗಳಾ ಇದ್ದಾಳಲ್ಲ? ಅವಳ ಸುಖ-ದುಃಖದ ಚಿಂತೀನೂ ನಾವು ಮಾಡೋದು ಬ್ಯಾಡ?

**ಅಪ್ಪಾ:—** ಹದ್ದು ಮೀರಿತು ನಿಮ್ಮ ಬುದ್ಧೀ ಮುಂದ! ಅಲ್ರಿ, ನಿಮ್ಮ ಸ್ವಂತ ಮಗಳ ಸುಖಕ್ಕ ಬೆಂಕಿ ಹತ್ತಿದಾಗ, ನೀವು ಇನ್ನೊಬ್ಬರ ಮಗಳ ಸುಖದ ಚಿಂತೀಮಾಡಿರಿ.

**ಇಂದಿರಾ:—** ಮಾತಾಡಬಾರದು ಅಂತ ಇಷ್ಟೊತ್ತು ಸುಮ್ಮನಿದ್ದೆ. ಇನ್ನ ಮಾತ್ರ ಆಡದ ಗತಿಯಿಲ್ಲ. ಅಲ್ರಿ, ದೂರದ ದೇಶದಿಂದ ಸುರಕ್ಷಿತನಾಗಿ ಬಂದ್ನಲ್ಲ, ಹುಟ್ಟಿದ ಮ್ಯಾಲ ಇದು ಮೊದಲ ಸಾರೆ ನಿಮಗ ಭೆಟ್ಟಿ ಆದ್ನಲ್ಲ: ಅಂಥ ಮಗನ ಜತಿಗೆ ನೀವು ಯಾವ ರೀತಿ ನಡಕೊಂಡಿರಿ?

**ಅಪ್ಪಾ:—** ಇನ್ನ ನಿಮ್ಮ ತಲಿ ತಪಾಸಮಾಡಿಸಬೇಕು! ಮಾನ-ಅಪಮಾನ ಎಲ್ಲಾ ಸುತ್ತಿಟ್ಟುಬಿಟ್ಟೀರಿ. ನಮಗಂತೂ ಇದು ಎಳ್ಳಷ್ಟೂ ಸೇರಕಿಲ್ಲ. ಇನ್ನ ನಾವು ಈ ಮನಿಯೊಳಗ ಒಂದು ಕ್ಷಣ ಸಹ ನಿಲ್ಲಲಿಕ್ಕೆ ತಯಾರಿಲ್ಲ. ನಡೀ ಬೇಬಿ. ನೀವೂ ನಡೀರಿ.

**(ಈ ಹೊತ್ತಿನಲ್ಲಿ ಶ್ರೀಕಾಂತ, ಇಂದಿರಾಬಾಯಿಯವರೊಡನೆ ಕಿವಿಮಾತು ಆಡುತ್ತಿರುತ್ತಾನೆ. ಅವನನ್ನುದ್ದೇಶಿಸಿ)**

**ಇಂದಿರಾ:—** ಶ್ರೀಕಾಂತ, ಆಮ್ಯಾಲ ಮಾತಾಡೋಣ. ಇವರ ಕಡೆಯಿಂದ ಏನಾದರೂ ಕೆಟ್ಟಮಾತು ಆಡಿಸಿ ಕೊಂಬೋದೇನು ಛಂದ?

**ಅಪ್ಪಾ:—** ಇದು ನೋಡಿರಿ. ನಿಮಗೇನು ಕಾರಸ್ಥಾನ ಮಾಡೋದದ, ಗುಜುಗುಜು ಮಾತಾಡೋದದ ಅದು ಮನಿಯೊಳಗ; ಇಲ್ಲೆ ಬ್ಯಾಡ. ಈಗ ಸುಮ್ಮನೆ ನಡೀರಿ, ಬೇಬಿ, ಏನು ಹೇಳ್ತೀನಿ ನಾನು?

**(ಇಂದಿರಾಬಾಯಿ ಮತ್ತು ಶ್ರೀಕಾಂತ ಹೊರಡುತ್ತಾರೆ.)**

**ಬೇಬಿ:—** ಒಂದು ಮಾತು, ಅಪ್ಪಾ, ವಿವಾಹದ ಈ ಜಾಗತಿಕ ಪ್ರಶ್ನಿ....

**ಅಪ್ಪಾ:—** ನಿನಗೇನು ಭಾಷಣಾ ಬಿಗಿಯೋದದ. ಲೆಕ್ಚರ್ ಹೊಡಿಯೋದದ ಅದು ಮನಿಯೊಳಗ. ಇನ್ನ ಒಂದು ಅಕ್ಷರ ಸಹಿತ ನಿನ್ನ ಬಾಯಿಂದ ಕೇಳಿಕೊಳ್ಳಲಿಕ್ಕೆ ನಾ ತಯಾರಿಲ್ಲ. ನಡಿ ಮುಂದ.

(ಇಬ್ಬರೂ ಹೋಗುತ್ತಾರೆ.)

(ಕೂಡಲೆ ತೆರೆ ಬೀಳುವುದು.)

*

# ಅಂಕ ೪

[ಉಷೆಯ ಮನೆ. ಪರದೆಯ ಅಚೆಗಿರಿಸಿದ ಮಂಚದ ಮೇಲೆ ಉಷಾ ಮಲಗಿ ನಿದ್ರೆಹೋಗಿದ್ದಾಳೆ. ಬೆಳಗಿನ ೮ ಗಂಟೆಯ ಹೊತ್ತು. ಚೈತನ್ಯ, ಉಷಾ ಏಳುವ ಹಾದಿ ಕಾಯುತ್ತಿದ್ದಾನೆ.]

ಚೈತನ್ಯ :— ಉಷಾಕುಟ್ಟೀ .... ಏಳು. ಎಂದೆ ಇವತ್ತು ಬಹಳ ಸಮಯಂ ನಿದ್ರೆ ?

[ಉಷಾ ಎಚ್ಚರಾಗುವದಿಲ್ಲ, ಕೊನೆಗೆ ಚೈತನ್ಯ ತಂಬೂರಿಯನ್ನು ತೆಗೆದು, ಅದರ ತಂತಿಗಳನ್ನು ಕೂಡಿಸತೊಡಗುವನು. ಆಗ ಒಂದು ತಂತಿ ಹರಿದುಹೋಗುತ್ತದೆ. ಅದರ ಸಪ್ಪಳಕ್ಕೆ ಉಷಾ ಕಿರಿಚಿಕೊಂಡು ಏಳುತ್ತಾಳೆ. ಹೊರಗೆ ಬಂದು ಕನ್ನಡಿಯಲ್ಲಿ ಬಾಗಿ ಬಾಗಿ ನೋಡುತ್ತಾಳೆ. ಬೆನ್ನಮೇಲೆ ಇಳಿಬಿದ್ದ ಹೆರಳನ್ನು ಮುಂದಕ್ಕೆ ತಂದು, ಪುನಃ ಪುನಃ ಅದನ್ನು ನೋಡುತ್ತಾಳೆ. ಚೈತನ್ಯ ಇದೆಲ್ಲವನ್ನೂ ಲಕ್ಷ್ಯಪೂರ್ವಕವಾಗಿ ನೋಡುತ್ತಿರುತ್ತಾನೆ. ಉಷೆಗೆ ಇದರ ಅರಿವಿಲ್ಲ. ಕೊನೆಗೆ ಚೈತನ್ಯ ಅವಳನ್ನು ಕೂಗಿ ಕರೆಯುತ್ತಾನೆ.]

ಚೈತನ್ಯ :— ಉಷಾಕುಟ್ಟೀ....

ಉಷಾ :— ನೀವು ಯಾವಾಗ ಬಂದಿರಿ, ದೊಡ್ಡಪ್ಪ ?

ಚೈತನ್ಯ :— ಕುಟ್ಟೀ, ಯಾಕೆ ಈ ನಮೂನೆ ಕೂಕುವಳಿ ಮಾಡ್ತೀ? ಎಂದಿನ್ ಇತ್ರ ಗಾಬರಿಯಾಗಿದಿ? ಕನ್ನಾಡಿ ನೋಡಿಯೋ?

ಉಷಾ :— ದೊಡ್ಡಪ್ಪ, ಕನಸಿನಲ್ಲಿ ನನ್ನ ಕೂದಲು ಬೆಳ್ಳಗಾದದ್ದನ್ನು ಕಂಡೆ. ಹೌದು, ತೀರ ಬೆಳ್ಳಗೆ! (ಪುನಃ ಗಾಬರಿಗೊಂಡು ಹೆರಳನ್ನು ನೋಡುತ್ತಾಳೆ.)

ಚೈತನ್ಯ :— ಸ್ವಪ್ನದಲ್ಲಿ ಯಾವದಾದರೂ ಕಾಣಸ್ತದೆ. ಸ್ವಪ್ನತ್ತಿಲ್ ವಾಯುವಿಲ್ ಹಾರಾಡುತ್ತೇವೆ. ಆನೆ ಮೇಲೆ ಕೂತು ವಾಯುವಿಲ್ ಹಾರಾಡುತ್ತೇವೆ. ಸ್ವಪ್ನಂ ಇಂಗೆನೆ ಇರುತ್ತದೆ, ಕುಟ್ಟೀ.

ಉಷಾ :— ಕೂದಲು ಬೆಳ್ಳಗಾದದ್ದಷ್ಟೇ ಅಲ್ಲ, ಇಡೀ ರಾತ್ರಿ ಅದೇನೋ ಚಮ-ಚಮತ್ಕಾರದ ಸ್ವಪ್ನಗಳು !

ಚೈತನ್ಯ :— ಇಂಗೆನೆಯೊ ?

ಉಷಾ :— ಒಂದಕ್ಕೊಂದು ಮೇಳಿಲ್ಲ. ಉದ್ದವಾದ ಒಂದು ರಸ್ತೆಯಿಂದ ಹೊರಟಿದ್ದೆ. ಎರಡೂ ಮಗ್ಗಲಿನ ಗಿಡಗಳ ತರಗೆಲೆಗಳು ರಾಶಿ-ರಾಶಿಯಾಗಿ ಬಿದ್ದಿದ್ದವು. ನಾನು ಅದರ ಮೇಲಿಂದಲೇ ನಡೆದಿದ್ದೆ. ನಡೆದು ನಡೆದು ದಣಿದೆ. ಆವ್ಯಾಲ, ಕೈಯಲ್ಲಿ ಒಂದು ಕೋಲು ತಕ್ಕೊಂಡು ಹೊರಟೆ.

ಚೈತನ್ಯ :— ಇಂತಹ ಸ್ವಪ್ನ ನೀನು ಕಂಡುವೊ ?

ಉಷಾ :— ಮುಂದೆ ಹೀಂಗs ಹೋದಾಗ, ತುಸು ಅಂತರದವ್ಯಾಲ ನನ್ನ ತಂದಿ ಕಂಡರು. ನನ್ನ ಬಳಗದ ಜನ ಕಂಡರು.

ಚೈತನ್ಯ :— ಪ್ರತ್ಯಕ್ಷತ್ತಿಲ್ ಅಪ್ಪನನ್ನು ನೀ ಕಂಡಿಲ್ಲ. ಮತ್ತೆ ಹೇಗೆ ಸ್ವಪ್ನತ್ತಿಲ್ ಅವನ ಕಂಡು ?

ಉಷಾ :— ಇಲ್ಲ, ನನ್ನ ತಂದೆಯುವರನ್ನ ನಾನು ಈ ಮೊದಲು ನೋಡಿರಲೇ ಇಲ್ಲ.

ಚೈತನ್ಯ :— ಅಪ್ಪನೆ ಕಂಡು ಎಂದರೆ ಯಾಕೆ ಕೂಕುವಳಿ ಮಾಡಿದಿ ?

ಉಷಾ :— ಇಲ್ಲ, ಕೊನಿಗೆ ನನಗ ವಸಂತ ಕಂಡ.

ಚೈತನ್ಯ :— ಹಾಗಾದರೆ ಎಂದಿನ ಕೂಕುವಿಳಿಚು. (ನಗುತ್ತಾನೆ.)

ಉಷಾ :— ಅಷ್ಟಕ್ಕೇ ಮುಗಿಯಲಿಲ್ಲ, ದೊಡ್ಡಪ್ಪ. ಒಂದು ದೊಡ್ಡ ತೋಟ. ಅದರಲ್ಲೊಂದು ತೂಗುಮಂಚ. ನನ್ನನ್ನ ವಸಂತ ಆ ಮಂಚದ ವ್ಯಾಲ ಕೂಡಿಸಿದ. ನಾ ಉಯ್ಯಾಲೆ ಆಡ್ತಿದ್ದೆ. ಅಷ್ಟರಲ್ಲಿ ಶ್ರೀಕಾಂತನಂಥ ಒಬ್ಬ ಮನುಷ್ಯ ಬಂದ. ಗಟ್ಟಿಯಾಗಿ ತೂಗಹತ್ತಿದ. ನಾನು ಗಾಬರಿಯಾಗಿ ಕೂಗಿದೆ; ಆದರೂ ಅಂವ ಇನ್ನಷ್ಟು ಗಟ್ಟಿಯಾಗಿ ತೂಗಿದ. ಮತ್ತ ಆ....(ಗಾಬರಿಗೊಂಡು ಕಣ್ಣುಮುಚ್ಚು ವಳು.)

ಚೈತನ್ಯ :— ಕುಟ್ಟೀ, ಸ್ವಪ್ನಗೆ ಯಾಕೆ ಭಯಪಡುನು ?

ಉಷಾ :— ದೊಡ್ಡಪ್ಪ, ಆಗ ಆ ಮಂಚದ ಸರಪಳಿಗಳು ಚಟ್‌ಚಟ್ ಎಂದು ಹರಿದವು. ಮತ್ತ....

ಚೈತನ್ಯ :— ಮತ್ತ ನೀಂ ಕೂಗಿದೆ. ಅರೆ ಕುಟ್ಟೀ, ಅದು ಮುರಿನ್ಯಾದು ಸರಪಳಿಯಲ್ಲ, ಅದು ಎಂಡೆ ವೀಣಾ ಕಂಬಿ ಮಾತ್ರ. ಆ ಸ್ವಪ್ನ ನೀ ಮರೆನುಬಿಡು. ಕುಟ್ಟೀ, ನಿನ್ನಿಯ ವೃತ್ತಾಂತ ಮೆಲ್ಲ ನನಕ್ಕೆ ಹೇಳು. ವಸಂತಂಡೆ ಮಾವ ಎಂದು ಹೇಳಿದರು? ನೀ ಎಂದು ಹೇಳಿದೆ?

ಉಷಾ :— ನಾನೇನಂತ ವಚನಕೊಡಲಿ ಅವರಿಗೆ? ವಸಂತನನ್ನ ಮದಿವಿ ಆಗುವದಿಲ್ಲ ಅಂತ ವಚನ ಕೊಡಲಿ?

ಚೈತನ್ಯ :— No, No, No. ವಸಂತನೆ ತನ್ನ ಕಲ್ಯಾಣ ಮಾಡಿಕೊ. ಅವನ ಆದ್ಯತ್ತ ಬಾರ್ಯೆಯು ಕೂಡ ನನ್ನ ಮಗಳ್ ಎಂದು ಪಾಲಿಸುತ್ತೇನೆ. ನೀ ವಸಂತನ ಮಾವಗೆ ಹೇಳು.

(ಗಂಟೆಯಾಗುತ್ತದೆ.)

ಉಷಾ :— (ಮೆಟ್ಟಿಬಿದ್ದು) ವಸಂತ ಇರಬಹುದು. ನಾನಿನ್ನೂ ಮುಖ ಸಹಿತ ತೊಳೆದುಕೊಂಡಿಲ್ಲ.

ಚೈತನ್ಯ :— ಕುಟ್ಟೀ, ನೀ ಪೊ, ನ್ಯಾನ್ ವಾಕಿಲ್ ತೆರೀತೇನೆ.

(ಉಷಾ ಒಳಗೆ ಹೋಗುತ್ತಾಳೆ. ಚೈತನ್ಯ ವಿಂಗಿನಲ್ಲಿ ಹೋಗಿ ಇಂದಿರಾಬಾಯಿಯೊಡನೆ ಬರುತ್ತಾನೆ.)

ಇಂದಿರಾ :— (ಬಂದ ಕೂಡಲೆ) ಉಷಾತಾಯಿ ಇದ್ದಾಳಲ್ಲ ಒಳಗ?

ಚೈತನ್ಯ :— ನೀಂಗಳ್ ಕೂತುಕೊಳ್ಳಿರಿ. ಉಷಾವರುನ್ನು.

[ಚೈತನ್ಯ ತಂಬೂರಿಯನ್ನು ಎತ್ತಿಡುತ್ತಾನೆ. ಕುರ್ಚಿಯನ್ನು ಮುಂದೆ ಮಾಡುತ್ತಾನೆ. ಯಾರೋ ಪರಾಯ ಹೆಣ್ಣುಮಗಳು ಎಂದು ಒಳಗೆ ಹೋಗುತ್ತಾನೆ. ಉಷಾ ಟಾವೆಲ್ಲಿನಿಂದ ಮುಖ ಒರಸಿಕೊಳ್ಳುತ್ತ ಹೊರಗೆ ಬರುವಳು.]

ಉಷಾ :— (ಬಂದಕೂಡಲೆ) ಬರಬ್ಯಾಡ ಅಂದರೂ ಬಂದೆಲ್ಲ, ವಸಂತ? (ಕಣ್ಣಮೇಲಿನ ಟಾವೆಲ್ ತೆಗೆಯುತ್ತಾಳೆ. ಇಂದಿರಾಬಾಯಿ ಕಣ್ಣಿಗೆ ಬೀಳುತ್ತಾರೆ.)

ಉಷಾ :— (ಅವರನ್ನು ನೋಡಿ) ಯಾರು—ಇಂದಿರಾಬಾಯಿ? ನೀವು? ನನ್ನ ಕಡೆಗೆ ಬಂದಿರಿ?

ಇಂದಿರಾ :— ಹೌದು, ನಿನ್ನ ಕಡೆಗೇ ಬಂದೆ. ನಿನಗ ಆಶ್ಚರ್ಯ ಆತ್ಯೇನು ನಾ ಬಂದದ್ದು ಕಂಡು?

ಉಷಾ :— (ಗೊಂದಲಗೆಟ್ಟು) ಇಲ್ಲ, ಹಾಂಗೇನೂ ಇಲ್ಲ.

ಇಂದಿರಾ :— ನಿನಗ··· ಅನಿಸಿರಲಿಕ್ಕಿಲ್ಲ. ಆದರ ಉಷಾ, ನನ್ನದು ನನಗs ಆಶ್ಚರ್ಯ ಅನಿಸ್ತದ. ಮೊನ್ನಿನ ಪ್ರಸಂಗದನಂತರ ನಾ ನಿನ್ನ ಕಡೆಗೆ ಈಗ ಪುನಃ ಬಂದೆ. ಯಾವದೊ ಒಂದು ಅಜ್ಞಾತ ಶಕ್ತಿ ನನ್ನನ್ನ ನಿನ್ನ ಮನೆಯ ಕಡೆಗೆ ತಿರುಗಿಸಿ ಎಳೆದು ತಂದಿತು.

ಉಷಾ :— (ಚುಚ್ಚು ಮಾತಿನಲ್ಲಿ) ಇನ್ನೊಮ್ಮೆ ನನ್ನ ಮನವೊಲಿಸುವ ಯತ್ನಮಾಡಿ ನೋಡಬೇಕು ಅಂತ ನಿಮಗನಿಸಿರಬಹುದು.

ಇಂದಿರಾ :— ಛೆ, ಛೆ, ಇಲ್ಲ ಉಷಾ. ನಿನ್ನ ಮನವೊಲಿಸುವದಕ್ಕ ಬೇಕಾಗೋ ಪುಣ್ಯಾ ಆದರೂ ನನ್ನ ಬಳಿ ಎಲ್ಲದ? ಯಾವಳ ತಾಯಿಯ ಸಂಸಾರಕ್ಕ ನಾನು ಕಿಡಿ ಹಾಕಿದೆ, ಅವಳ್ನ ನನ್ನ ಮಗಳ ಸಂಸಾರ ಉಳಿಸು ಅಂತ ನಾ ಯಾವ ಬಾಯಿಲೆ ಕೇಳಲಿ?

ಉಷಾ: — ಖರೇನs ಅದ. ನಾ ಮೊನ್ನೆ ಮಾಡಿದ····ನಿಶ್ಚಯ····

ಇಂದಿರಾ :— ಅದನ್ನ ಮಾಡಿದಾಕಿ ನೀನು? ನನಗಾಮಾತಿನ ಮ್ಯಾಲ ವಿಶ್ವಾಸಿಲ್ಲ, ಉಷಾ. ಆ ನಿಶ್ಚಯ ಮಾಡೋ ಉಷಾ ನೀ ಇರಲಿಲ್ಲ!

ಉಷಾ :— ನಾ ಇರಲಿಲ್ಲ····ನಾ ಇರಲಿಲ್ಲ?

ಇಂದಿರಾ :— ಅಂಹಂ! ಮೊನ್ನಿನ ನಿನ್ನ ಸಂತಾಪ, ನಿನ್ನ ಸೇಡಿನ ವಿಚಾರ, ಅಂತಃಕರಣವನ್ನ ಹಿಂಡಿ ಉಮ್ಮಳಿಸಿ ಹೊರಬಿದ್ದ ದುಃಖ— ಈ ಎಳೆವಯಸ್ಸಿನಲ್ಲಿ ಅಂಥ ಕಷ್ಟದ ಅನುಭವ ನಿನಗೆಲ್ಲಿಂದ ಬರಬೇಕು?

ಉಷಾ :— ಎಲ್ಲಿಂದ ಅಂದರ?

**ಇಂದಿರಾ:**— ಆ ದುಃಖ ನಿನ್ನದಲ್ಲ, ನಿನ್ನ ತಾಯಿ ಸಾಯುವವರೆಗೆ ಸಹಿಸಿದ ಎಲ್ಲ ಮಾನಸಿಕ ಯಾತನೆಗಳೂ ಶಾಬ್ದಿಕರೂಪ ತಾಳಿ ನಿನ್ನ ಮುಖದಿಂದ ಹೊರಬಿದ್ದವು. ಮಹಾಸಾಗರದಂತೆ, ತನ್ನ ಶೋಕದ ವಡವಾಗ್ನಿಯನ್ನ ತನ್ನ ಹೊಟ್ಟೆಯಲ್ಲಿರಿಸಿಕೊಂಡು, ಅಪಮಾನದ ವಿಷವನ್ನ ಆಕಿ ಹ್ಯಾಂಗ ನುಂಗಿಕೊಂಡಿರ-ಬಹುದೊ ದೇವರೇ ಬಲ್ಲ! ಸಂತಾಪ-ನಿರಾಶೆಗಳ ಭಾರವನ್ನು ಸಹಿಸಲಾರದೆ ಅವಳ ಪ್ರಾಣ ಎಷ್ಟು ಸಂಕಟಪಟ್ಟಿರಬೇಕು! ಅದರ ಶಬ್ದಚಿತ್ರವನ್ನ ನೀನು ಮೊನ್ನೆ ಚಿತ್ರಿಸಿ ತೋರಿಸಿದಾಗಲೇ ನನಗನಿಸಿತು, ನೀನು ನಿಜವಾದ ಉಷಾ ಅಲ್ಲ, ಶರೀರ ಮಾತ್ರ ನಿನ್ನದು, ಮಾತಾಡಿದವಳು ನಿನ್ನ ತಾಯಿ ಅಂತ. ಉಷಾ, ವಸಂತರಾಯನನ್ನ ಮದಿವಿಯಾಗುವ ನಿರ್ಧಾರ ನೀನು ಮಾಡಿದಿ? ನಾನು ಕೇಳಲೇ ಇಲ್ಲ, ನಿನ್ನ ಆ ಮಾತುಗಳನ್ನ!

**ಉಷಾ:**— ಏನು? ನೀವು ಆ ನನ್ನ ಮಾತು ಕೇಳಲೇ ಇಲ್ಲ?

**ಇಂದಿರಾ:**— ಇಲ್ಲ. ನಾ ಏನು ಕೇಳಿದೆ, ಏನು ನೋಡಿದೆ, ಅದನ್ನ ಉಷಾ ಹ್ಯಾಂಗ ನಾ ಹೇಳಲಿ? ನಿನ್ನ ಕಣ್ಣಿನಿಂದಲೇ ನಿನ್ನ ತಾಯಿ ನನ್ನ ಕಡೆಗೆ ತಿರಸ್ಕಾರದಿಂದ ನೋಡಿ ಹೀಂಗ ಅಂದಂತೆ ಭಾಸಾಯ್ತು—'ನನ್ನ ಸಂಸಾರ ನೀನು ಮುಳುಗಿಸಿದಿ, ಇನ್ನ ನನ್ನ ಮಗಳು—ನನ್ನ ರಕ್ತಮಾಂಸದಿಂದಲೇ ಬೆಳೆಸಿದ ಆ ನನ್ನ ಮಗಳು—'ನಿನ್ನ ಮಗಳ ಸಂಸಾರಕ್ಕ ಬೆಂಕೀ ಹಚ್ಚದ ಎಂದೂ ಇರಲಿಕ್ಕಿಲ್ಲ.' (ಮೈಗೆ ನವಿರು ಬಂದಂತಾಗಿ) ಉಷಾ, ಅಂದು ನಿನ್ನ ಬಾಯಿಂದ ಹೊರಬಿದ್ದ ಈ ನಿರ್ಧಾರ ನಿನ್ನದಿರಲಿಲ್ಲ, ನಿನ್ನ ತಾಯಿಯದಿತ್ತು!

**ಉಷಾ:**— **(ಮುಖ ಮುಚ್ಚಿಕೊಂಡು)** ಇಂಥ ದುಷ್ಟಳಿರಲಿಲ್ಲ ನನ್ನ ತಾಯಿ.

**ಇಂದಿರಾ:**— ಮತ್ತ ನೀನೂ ಇಲ್ಲ, ಉಷಾ. ಆದರ ಇದು ನಿಸರ್ಗದ ನ್ಯಾಯ! ಪರರ ಆಹುತಿಗಾಗಿ ಹವಣಿಸುವವರಿಗೆ ತಾವೇ ಆಹುತಿಯಾಗುವ ಪ್ರಸಂಗ ಬರೋದು ಸ್ವಾಭಾವಿಕ.

ಉಷಾ:— ಹೌದಲ್ಲ? ನನ್ನ ತಾಯಿಯ ಸುಖದ ಆಹುತಿಯನ್ನ ನೀವು ತಕ್ಕೊಂಡಿರಲ್ಲ?

ಇಂದಿರಾ:— ನಿನ್ನ ತಾಯಿಯ ಸುಖದ ಆಹುತಿಯನ್ನ ನಾ ತಕ್ಕೊಂಡೆ? ಹೌದೇನು? (ಶೂನ್ಯದ ಕಡೆಗೆ ನೋಡುತ್ತ) ಹೌದು. ಆ ಸಮಯಕ್ಕ ಹೀಂಗs ಅಂದಿತು ಜಗತ್ತು. ಇನ್ನೂ ಆದರೂ ಹೀಂಗs ಅಂತದ—ಜನ ಅಂದರ ಮರುಳು! ದೃಶ್ಯದ ಆಚೆಗಿರುವದರ ಅರ್ಥ ಅದಕ್ಕೆಲ್ಲಿ ತಿಳೀತದ? ನಾನು ಕೂಡ ಆಗ ಜನ ಆಡಿದ್ದೇ ಸತ್ಯ ಅಂತ ಭಾವಿಸಿಕೊಂಡೆ. ಜನದ ರೀತಿಯೇ ಬ್ಯಾರೆ. ಆದರ, ನೀನು ಪ್ರತ್ಯಕ್ಷ ನಮ್ಮ ಮಗಳು; ನಿನಗೂ ಹಾಂಗs ಅನಿಸಿದ್ದನ್ನ ಕಂಡೆ. ಅಷ್ಟೇ ಅಲ್ಲ, ಆ ಕಲ್ಪನೆಯಿಂದ ನಿನಗಾಗ್ತಿರೋ ಯಾತನೆಗಳನ್ನೂ ಕಂಡೆ. ನನಗ ಬಾಯಿ ಹೊಲಕೊಂಡು ಕೂಡೋದು ಅಸಾಧ್ಯ ಆಯ್ತು. ಇಪ್ಪತ್ತೈದು ವರ್ಷ ಹತ್ತಿಟ್ಟ ಮನಸ್ಸು ಮೊನ್ನೆಯಿಂದ ನನ್ನ ಅಂಕೆಯನ್ನು ಮೀರಿ ಹೊರಬಂದು ಹೇಳಿತು— 'ನೀನು ಯಾರ ಸಂಸಾರವನ್ನೂ ಹಾಳುಮಾಡಲಿಲ್ಲ, ಇದರಲ್ಲಿ ಎಳ್ಳಷ್ಟೂ ನಿನ್ನ ಅಪರಾಧವಿಲ್ಲ.'

ಉಷಾ:— ಏನು ಮಾತು ನಿಮ್ಮದು? ನೀವು ಯಾರ ಸಂಸಾರವನ್ನೂ ಹಾಳುಮಾಡಲಿಲ್ಲ?

ಇಂದಿರಾ:— ಇಲ್ಲ, ಎಂದೂ ಇಲ್ಲ. ಉಷಾ, ನಿನ್ನ ತಾಯಿಯ ಸಂಸಾರ ನನ್ನಿಂದ ಎಂದೂ ಹಾಳಾಗಲಿಲ್ಲ; ಅದರ ಬದಲಾಗಿ ಅವರು ಹೂಡಿದ ಸಂಸಾರಪಟದ ಮ್ಯಾಲ ನನ್ನ ಸುಖದ ಮೊಹರೆ ಮಾತ್ರ ಆಹುತಿ ಆಯ್ತು! ಉಷಾ, ಬಲಿದಾನ ಅವರದಾಗ-ಲಿಲ್ಲ, ನನ್ನದಾಯ್ತು! ಆ ಇರಿಕಿನಲ್ಲಿ ಸಿಕ್ಕ ನನ್ನ ಜೀವ ಈಗ ಇಪ್ಪತ್ತೈದು ವರ್ಷ ಉಸಿರುಗಟ್ಟಿ ಒದ್ದಾಡತಾ ಅದ! ನನ್ನನ್ನ ಈ ಪೇಚಾಟಕ್ಕ ಗುರಿಮಾಡಿದವರು ಬ್ಯಾರೆ-ಯವರ್ಯಾರೂ ಅಲ್ಲ; ಪ್ರತ್ಯಕ್ಷ ನನ್ನ ಹಡೆದ ತಾಯಿ! ಪಾಪ, ನನ್ನ ತಾಯಿಗೆ ನನ್ನ ಮುಂದಿನ ಆಯುಷ್ಯದ

ಕಲ್ಪನೆಯೂ ಇರಲಿಕ್ಕಿಲ್ಲ, ಅವಳಿಗನಿಸಿರಬೇಕು—ಗಂಡ ಚಿಕ್ಕವ ಇದ್ದಾನ, ಉಮೇದಿಯುವ ಇದ್ದಾನ, ದುಡ್ಡುಳ್ಳವ ಇದ್ದಾನ, ಮೊದಲನೆ ಹೆಂಡತಿನ್ನ ನೇರೋದಿಲ್ಲ ಅಂದ ಮ್ಯಾಲ, ತನ್ನ ಮಗಳಿಗೆ ಬಹಳ ಸುಖ ಆದೀತು—ಅಂತ.

**ಉಷಾ** :— ಮತ್ತ, ಹಾಂಗ ನಿಮ್ಮ ಸುಖಕ್ಕ ಯಾವದೂ ಕೊರತಿ ಇರಲಿಲ್ಲ.

**ಇಂದಿರಾ** :— ಎಲ್ಲರಿಗೂ ಹೀಂಗS ಅನಿಸಿತು, ಅಂದಮ್ಯಾಲ ನಿನಗನಿಸಿದ್ದರಲ್ಲಿ ಆಶ್ಚರ್ಯೇನು? ಮತ್ತ ಹೊರಗಿಂದ ನೋಡುವವರಿಗೆ ಹಾಂಗ ಇದ್ದೂ ಇತ್ತು. ನೋಸಿತ್ತು, ಸಂಪತ್ತಿತ್ತು, ಭಂಗಾರದಂಥ ಎರಡು ಮಕ್ಕಳಿದ್ದವು. ಹಾಂಗ ಉಷಾ, ನಿನ್ನ ಹಡದವರು ನನಗ ಯಾವದಕ್ಕೂ ಕಡಿಮಿ ಮಾಡಲಿಲ್ಲ. ಆದರ....

**ಉಷಾ** :— ಯಾಕ? ಆದರೇನು ಮತ್ತ?

**ಇಂದಿರಾ** :— ಯಾಕೋ ಯಾರು ಬಲ್ಲರು, ಜೀವನದ ಆನಂದವನ್ನು ಮನ-ಸೇಚ್ಛೆಯಾಗಿ ಅನುಭವಿಸಲಿಕ್ಕೆ ನನಗಾಗಲೇ ಇಲ್ಲ. ಒಳಗ ಮನಸ್ಸಿನ ಕೊರಿ, ಹೊರಗ ಸಮಾಜದ ಹಂಗಣಿ. ಈ ಎರಡರ ಚುಚ್ಚಿನ ವೇದನೆಗಳಿಂದ ನನ್ನ ಜೀವನಕ್ಕ ಸಹಿಸಲಾರದಷ್ಟು ಸಂಕಟಾಯ್ತು. ಹೊಸಮೊದಲಗಿತ್ತಿ ಅಂತ ನಾ ಮನೀಗೆ ಬಂದೆ. ಅತ್ತಿಯುನರೂ ನನ್ನ ಕೌತುಕ ಸಾಕಷ್ಟು ಮಾಡ-ತಿದ್ದರು. ಯಾರೊಬ್ಬರೂ ಅತ್ತಿಯುವರ್ನ ಕೇಳುವವರು—'ಇವರೇ ಏನು ನಿಮ್ಮ ಎರಡನೆ ಸೊಸಿ?' ಕುತ್ಸಿತತನದ ಆ ಪ್ರಶ್ನಿ ನನ್ನ ಕರುಳನ್ನ ಕೊರೀತಿತ್ತು. ನಮ್ಮ ಮನಿಯಲ್ಲಿ, ತಪ್ಪಿ ಕೂಡ ಮೊದಲನೆಯ ಲಗ್ನದ ಉಲ್ಲೇಖ ಮಾತಿನಲ್ಲಿ ಬರುತ್ತಿರಲಿಲ್ಲ. ಆದನ್ನ ಮರೀಲಿಕ್ಕೆ ಇವರೆಷ್ಟೆಷ್ಟು ಪ್ರಯತ್ನ ಮಾಡತಿದ್ದರು ಅಷ್ಟಷ್ಟು ಆ ಸತ್ಯ ನನಗಂಟಿಕೊಳ್ತಾ ಇತ್ತು! ದಿನದ ಇಪ್ಪತ್ತುನಾಲ್ಕು ತಾಸೂ ನನ್ನ ಜೀವನದ ಮ್ಯಾಲ ನಿನ್ನ ತಾಯಿಯು ಛಾಯೆ ಇದ್ದೇ ಇರೋದು. ನನ್ನ ಸಂಸಾರದ ಪ್ರತಿಯೊಂದು ವಸ್ತುವನ್ನೂ ಅವರು ಬಳಸಿದ್ದರು.

ಮತ್ತ, ಅವರ ವಸ್ತ್ರಗಳನ್ನೇ ನಾನು ತೊಡತಿದ್ದೆ. ಗೋಟು—ಪಾಟ್ಲಿಯು ಈಡು ಸಣ್ಣದ್ಯಾಕ? ಅವರು ಅಶಕ್ತರಿದ್ದರು ಅಂತ. ನತ್ತು ದೊಡ್ಡದ್ಯಾಕ? ಅವರಿಗೆ ಒಪ್ಪತಿತ್ತು ಅಂತ. ಲಗ್ನ ಆದ ಹೊಸತಾಗಿಯಂತೂ ನನ್ನ ಸುತ್ತಲಿನ ವಾತಾವರಣ ಅವರ ಅಸ್ತಿತ್ವದ ಸಾಕ್ಷಿಯನ್ನೇ ಸಾರತಿತ್ತು. ಮೊದಲು ತೀರಿಕೊಂಡ ಸವತಿಯು ಹೆಸರಿಲೆ ಸಂಸ್ಕಾರದ ಉಡೀ ತುಂಬಿದರ, ಅವರ ಋಣದಿಂದ ಮುಕ್ತಾಗಲಿಕ್ಕೆ ಬರ್‍ತದ. ಆದರ ಜೀವಂತ ಸವತಿಯು ಋಣ! ಅದಕ್ಕೆಂದೂ ಪರಿಹಾರ ಇಲ್ಲ! ಉಷಾ, ನೀನು ಮೊನ್ನೆ ಮಾತಿನೊಳಗ ಅಂದಿ—ನಿನ್ನ ತಾಯಿ ಇಡೀ ಆಯುಷ್ಯ ಜೀವ ಹಿಚಿಕ್ಕೊಂಡು ಜೀವನ ನಾಗಿಸಿದಳು ಅಂತ. ಆದರ ನಿಜವಾಗಿ ಅದು ಹಾಂಗಿರಲಿಲ್ಲ. ಯಾವ ಮನಿಯಲ್ಲಿ ಅವರ ಮ್ಯಾಲ ಅನ್ಯಾಯ ಆತ್ಯು, ಆ ಮನಿಯಲ್ಲಿ ತಿರಿಗೆಂದೂ ಕಾಲುಹಾಕದೆ ಅವರು ಬ್ರಹ್ಮದೇಶದ ಹಾದೀ ಹಿಡಿದರು. ಉಷಾ, ಖರೆ ಜೀವಾ ಹಿಚಿಕ್ಕೊಂಡು ಬಾಳ್ವೆಮಾಡಿದ್ದು ನಾನು! ಇನ್ನೂ ಮಾಡ್‌-ತಲೇ ಇದ್ದೀನಿ. ಮತ್ತ ಇನ್ನಂತೂ, ಅಕ್ಕೂ ಮನೀಗೆ ಬಂದಮ್ಯಾಲ, ಅವಳ ಜೋಡು ನನ್ನ ಜೀವನದುದ್ದಕ್ಕೂ ನನಗ ದೊರಕೋದದ! ನಮ್ಮ ಶ್ರೀಕಾಂತ ಆಗಾಗ್ಗೆ ಅಂತಾನ: 'ಕಕ್ಕೀ ಮದಿವಿ ಅಂದರ ಒಂದು ಜೂಜಾಟ,' ಅಂತ! ಬಹಳ ಖರೆ ಅದ ಆ ಮಾತು. ಒಮ್ಮೆ ಸುಖಕ್ಕ ಕಾರಣಾಗ್ತದ, ಒಮ್ಮೆ ಆಗೋದೂ ಇಲ್ಲ. ಜೂಜಿನ ಲಕ್ಷ-ಣಾನs ಅದು. ಆದರ ನನ್ನ ಮದಿವಿಯು ಜೂಜಿಗೂ ನಾ ಹೊಣೆಯಿರಲಿಲ್ಲ ಉಷಾ! ನನ್ನ ಕೈಯಲ್ಲಿ ಲೆತ್ತ ಇಡಲಾಯ್ತು; ನಾ ಅದನ್ನ ಒಗೆಯಲಿಲ್ಲ ಕೂಡ. ಆವು ಅಂಜಿಕೆಯಿಂದ ಕೈಜಾರಿ ಬಿದ್ದದ್ದೇ ಘಾಶಿ ಎಂದಾಯ್ತು! ನಾನು ಸುಖಿಯಾದೆ ಅಂತ ಸರ್ವರೂ ಸಂತೋಷಪಟ್ಟರು. ನಾನೂ ಅದನ್ನಂಗೀ-ಕರಿಸಿದೆ. ಪಾತಿವ್ರತ್ಯದ ಪಾಲನಕ್ಕಾಗಿ ನಾ ಅದನ್ನೊಪ್ಪಿದರೂ,

ಉಷಾ, ಅದು ನನ್ನ ಪ್ರೀತಿವಿವಾಹ ಇರಲಿಲ್ಲ. ಆ ಲೆತ್ತವನ್ನ ನಾನಾಗಿ ಹಿಡಿದಿರಲಿಲ್ಲ.

**ಉಷಾ:—** ಈಗ ಆ ಲೆತ್ತವನ್ನ ನಾನಾಗಿ ಹಿಡಿಯುವವಳಿದ್ದೇನೆ.

**ಇಂದಿರಾ:—** ಅಗsತ್ಯ ಹಿಡಿ. ಅವನ್ನ ಹಿಡೀಬ್ಯಾಡ ಅಂತ ನಾ ಹ್ಯಾಂಗ ಹೇಳಲಿ? ಆದರ ಉಷಾ, ಆ ಪರಮಾತ್ಮನ ಹೆಸರು ತಕ್ಕೊಂಡು ಹೇಳ್ತೀನಿ—ಅಕ್ಕನ ತಾಯಿ ಅಂತಲ್ಲ—ಪುರುಷಹೃದಯದ ಅನುಭವ ಪಡೆದ ಸ್ತ್ರೀ ಅಂತ ಹೇಳ್ತೀನಿ—ಹಿಡಿದ ಲೆತ್ತವನ್ನ ವಿಚಾರಮಾಡಿ ಒಗಿ, ನಿನಗ ಬೇಕಾದ ಫಾಶಿ ಬಿತ್ತು, ಒಳ್ಳೇದs ಆತ್ಯು; ಬೀಳಲಿಲ್ಲ ಅಂದರ ಮಾತ್ರ ಫಶಿಗಿಬಿದ್ದ ನಿನ್ನ ಪ್ರೇಮದ ಬಂಡವಾಳದ ದಿವಾಳಿ ಆಗಿ, ಉಳಕೊಂಡೇನು ಅಂದರ ಸಮಾಜದ ಸಹಾನುಭೂತಿಯ ಸಾಲ ಕೂಡ ನಿನಗ ಸಿಗಲಿಕ್ಕಿಲ್ಲ!

**ಉಷಾ:—** ಸಮಾಜದ ಪ್ರತಿಷ್ಠಾ! ಅದಕ್ಕ ನಾ ಯಾಕ ಬೆಲೀ ಕೊಡಬೇಕು? ನಮ್ಮ ಜೀವನ ಸುಖಿಯಾಗೋದು ನಾವು ನೋಡಿಕೊಂಡರಾತ್ಯು.

**ಇಂದಿರಾ:—** ನಾವು ಅಂದರ ಯಾರು, ಉಷಾ? ನೀವು ಗಂಡ-ಹೆಂಡತಿ? ಉಷಾ, ನೀನು ನಿಜವಾಗಿಯೇ ಚಿಕ್ಕಾಕಿದ್ದೀ, ನನಗೂ ನಿನಗೂ ಒಂದು ತಲೆಮಾರಿನ ಅಂತರ ಅದ! ಪ್ರೀತಿ ವಿವಾಹದಿಂದ ಹೆಂಗಸು ಸುಖಿಯಾಗ್ತಾಳ ಅನ್ನೋ ನಮ್ಮ ಕಲ್ಪನೆಯೇ ಹಾಸ್ಯಾಸ್ಪದ! ಪುರುಷರ ಚಂಚಲ ಸ್ವಭಾವ, ಹೆಂಗಸರು ಅದನ್ನ ಬಂಧನದಲ್ಲಿಡುವದಕ್ಕಾಗಿ ಅಖಂಡವಾಗಿ ನಡೆಯಿಸಿದ ಅಟ್ಟಹಾಸ, ಈ ಎರಡರೊಳಗಿಂದ ನಿರ್ಮಾಣವಾದ ಲಗ್ನ ಅಂದರ ಒಂದು ವಿಚಿತ್ರವಾದ ಚಕ್ರಬಂಧಸ್ಪರ್ಧೆ! ಪ್ರೀತಿ ವಿವಾಹ ಅನ್ನುವ ಒಂದೇ ಮಾತಿನಿಂದ ಅದು ಬಿಡಿಸಲಿಕ್ಕೆ ಬಾರದು. ಮತ್ತ ಅದೇ ಕಾರಣದ ಮೂಲಕ ಅದರ ಜೂಜಿನ ಸ್ವರೂಪವೂ ಬದಲಾಗಲಾರದು. ಈ ಚಕ್ರಬಂಧ ಬಿಡಿಸೋದಿದ್ದರ, ನಾವು ಹೆಂಗಸರು ವಿಚಾರಪೂರ್ವಕವಾಗಿ

ಬಿಡಿಸಬೇಕಾದೀತು. ಬರಿ ಸುಖದ ಒಂದು ಸಾಧನ ಅಂತ ಆಶೆಬುರುಕತನದಿಂದ ಅದನ್ನ ನೋಡಲಾಗದು.

ಉಷಾ :— ನನಗದರಲ್ಲಿ ಸುಖ ಅನಿಸ್ತಾ ಇದ್ದರ....

ಇಂದಿರಾ :— ಇಲ್ಲ, ಉಷಾ. ಖರೆ ಹೇಳಲಿ? ಸ್ತ್ರೀ ಜಾತಿಗೆ, ಸತ್ಯ ವಾಗಿಯೇ ಸುಖದ ಲಾಭ ಒಂದೇ, ಕಲ್ಪನೆಯಲ್ಲದ—ತಾಯ್ತನದಲ್ಲಿ. ಉಷಾ, ನನ್ನ ಆಯುಷ್ಯದ್ದು ನನಗ ನೆನಪದ. ಮದಿವೆಯಿಂದ ನಾನು ಸುಖಿಯಾದೆನೊ ಇಲ್ಲೋ ಹೇಳಲಾರೆ; ಆದರ ಚೊಚ್ಚಲು ಹಡೆದಾಗ, ಅಕ್ಕೂನ ಮೊದಲನೆ 'ಟ್ಯಾಹಾಂ' ಕೇಳಿದೆ. ಯಾವುದೊ ಒಂದು ಅನಿರ್ವಚನೀಯವಾದ ಆನಂದದಿಂದ ನನ್ನ ಶರೀರದ ಕಣ-ಕಣಗಳೂ ಉದ್ರಿಕ್ತಗೊಂಡವು! ಅಕ್ಕು ಮತ್ತು ಬೇಬಿ—ಇವರಿಬ್ಬರ ಜೀವದ ಮ್ಯಾಲ ನಾ ನನ್ನೆಲ್ಲ ದುಃಖಗಳನ್ನೂ ಮರೆತೆ. (ನೆನಸಿಕೊಂಡು) ಬೇಬಿಯ ಮೇಲಿನ ನನ್ನ ಗಂಡು ಕೂಸು—ಅದಕ್ಕ ಜಡ್ಡಾತ್ಯು, ಆಗ ಒಂದು ದಿವಸ ನನಗ ಕನಸು ಬಿತ್ತು. ನಾನು ದೇವರ ಮನಿಯಲ್ಲಿ ಅದೇ ನಂದಾ-ದೀಪ ಹಚ್ಚಿದ್ದೆ. ಎಲ್ಲಿಂದಲೋ ಗಾಳಿಯ ಜುಳುಕು ಬಂದು ಆ ದೀಪ ಆರಿಹೋತ್ಯು. ಹೊಟ್ಟೆಯಲ್ಲಿ ಧಸ್ಸಾತ್ಯು. ಆಗ ವಾತಾವರಣದಲ್ಲಿ ವಿಲೀನವಾದ ಶಬ್ದಗಳನ್ನ ಕೇಳಿದೆ:—"ಈ ಮನೆಯಲ್ಲಿ ನಂದಾದೀಪ ಹಚ್ಚುವ ಅಧಿಕಾರ ನಿನಗಿಲ್ಲ!" ನನ್ನ ಕಂದಮ್ಮ....(ಒಮ್ಮೆಲೆ ಮುಖ ಮುಚ್ಚಿಕೊಂಡು ಬಿಕ್ಕುವಳು.) ಹೋಗಲಿ, ಬೇರೆ ಲೋಕದಲ್ಲಿ ಅಂವ ಚಿರಂಜೀವಿ ಆಗಿರಲಿ....ಹೌದು, ನನಗ ಆ ಅಧಿಕಾರ ಇರಲಿಲ್ಲ. ಯಾಕಂದರ ನನ್ನ ಸಂಸಾರದ ಬುನಾದಿಯನ್ನ ಹಾಕುವಾಗ ಒಂದು ಜೀವ ಅದಕ್ಕ ಬಲಿಯಾಗಿತ್ತು, ಮತ್ತ ಆ ಜೀವ ಒಬ್ಬ ಬಸಿರುಹೆಂಗಸಿನದಿತ್ತು ಅಂಬೋದೂ ಮೊನ್ನೆ ನನಗ ತಿಳೀತು. ಉಷಾ, ನಾ ಯಾರಿಗೂ ದೋಷ ಕೊಡೋದಿಲ್ಲ. ನನ್ನ ಅಕ್ಕು....ಮತ್ತ ನಾನು....ಈಗ ಹದಿನೈದು

ದಿವಸಗಳಾದವು....ಒಬ್ಬರಿಗೊಬ್ಬರು ಕಣ್ಣಿಗೆ ಕಣ್ಣು ಕೊಡಲಿಕ್ಕೆ ಅಂಜತೀವಿ, 'ಉಷಾ ನಿನಗ ಅನ್ಯಾಯ ಮಾಡ್ತಾಳ' ಅಂತ ಯಾವ ನಾಲಗೆಯಿಂದ ನಾ ಆಕಿಗೆ ಹೇಳಲಿ? ಯಾವ ಮಗಳ ಜನ್ಮದಿಂದ ನನ್ನ ಜೀವನವೇ ಸಾರ್ಥಕಾತ್ಯು ಅಂತ ನನಗನಿಸಿತ್ತೋ, ಅವಳ ಅದೃಷ್ಟದ ಈ ದುರಂತವನ್ನ ನನ್ನ ಕಣ್ಣೆದುರಿನಲ್ಲೇ ನಾ ನೋಡ್ತ ಇದ್ದೀನಿ. ಆದರೂ ನನಗೇನು ಮಾಡಲಿಕ್ಕಾಗೇದ? ಮಕ್ಕಳಿಗೆ ಜನ್ಮ ಕೊಡೋದು ನಮ್ಮ ಕೈಯ್ಯಲ್ಲಿದ್ದೀತು. ಆದರ, ಸುತ್ತಲೂ ವ್ಯಾಪಿಸಿದ ವಿಚಿತ್ರ ಕೋಲಾಹಲದೊಳಗಿಂದ ಅವರನ್ನ ಸಂರಕ್ಷಿಸಿ, ಸುಖಿಯಾಗಿ ಮಾಡೋದು ನಮ್ಮ ಕೈಯಲ್ಲಿಲ್ಲ. ನನಗ ನೆನಪದ—ನಿನ್ನ ತಾಯಿ ತೀರಿಕೊಂಡ ಸುದ್ದಿ ತಿಳೀತು,— ಈಗ ಹೇಳ್ಳಿಕ್ಕೆ ಮನಸ್ಸು ಹಿಂಜರೀತದ—ನನಗ! ಆಗ ಸಮಾಧಾನ ಅನಿಸಿತು! ಒಂದು ನಿರಪರಾಧಿಯಾದ ಜೀವ, ಜಗತ್ತಿನ ಅನ್ಯಾಯಕ್ಕ ಬ್ಯಾಸತ್ತು, ಹೇಸಿಕೊಂಡು, ಈ ಜಗತ್ತು ಬಿಟ್ಟುಹೋತ್ಯು, ಮತ್ತ ನಾವು ತಿಳುಕೊಂಡಿವಿ ನಾವಿಬ್ಬರೂ ಸುಖಿಯಾದಿವಿ ಅಂತ. ನಾಳೆ ನಿಮ್ಮಿಬ್ಬರ ಮದಿವಿ ಆತ್ಯು ಅಂದರ ಮನಸ್ಸಿನೊಳಗ ಯಾವದನ್ನ ನೀವು ಆತುರವಾಗಿ ಅಪೇಕ್ಷಿಸಬಹುದು? ನನ್ನ ಅಕ್ಕೂನ ಮರಣ! ತನ್ನ ಸುಖಕ್ಕಾಗಿ ಇನ್ನೊಬ್ಬರ ಮರಣದ ಹಾದೀ ಕಾಯೋದು! ಮಾನವನ ಅಧಃಪಾತದ ಪರಮಾವಧಿ ಇನ್ನೂ ಎಲ್ಲಿಗೆ ಮುಟ್ಟೋದದ! ಉಷಾ, ನಾ ನಿನ್ನ ದೂಷಿಸಲಾರೆ. ಎಂದು ವಸಂತರಾಯನ ಮನಸ್ಸಿನಲ್ಲಿ ನಿನ್ನ ಲಗ್ನವಾಗುವ ವಿಚಾರ ಬಂತೋ ಅಂದೇ ನನ್ನ ಅಕ್ಕೂನ ಸಂಸಾರದ ಕಾಯಿ ಆಣ ಬಿಟ್ಟಿತು! ನಿನಗ ಹೇಳಿಕೊಂಡರ ಅದು ಸರಿಹೋದೀತು ಅಂತ ನನಗ ಅನಿಸದಿದ್ದರೂ, ನಾ ನಿನ್ನ ಕಡೆಗೆ ಬಂದೆ. ಅದು ಅಕ್ಕೂನ ಸಂಸಾರದ ಭಿಕ್ಷೆಗಾಗಿ ಅಲ್ಲ; ನನ್ನ ಹತ್ತಿಟ್ಟ ಮನಸ್ಸನ್ನು ಹರಿಬಿಡುವದಕ್ಕಾಗಿ, ನನ್ನ ವಿಷಯವಾಗಿ

ನಿನಗಿದ್ದ ದುರಭಿಪ್ರಾಯವನ್ನ ತೆಗೆದುಹಾಕುವದಕ್ಕಾಗಿ! ಅಕ್ಕೂಗ ಸುಖ ಆದರ ನನಗ ಬ್ಯಾಡಾಗೇದೇನು? ಆದರ ಆ ಮಾತು ಈಗ ಯಾರ ಕೈಯಲ್ಲೂ ಉಳಿದಿಲ್ಲ. ಆದರ ಉಷಾ, ಚಿಕ್ಕವಳಿರುವಾಗಿನಿಂದಲೇ ಯಾವ ಮಮತೆಯ ಸುಖಕ್ಕ ನೀನು ಎರವಾಗಿದ್ದಿ ಅದನ್ನ ನಿನಗ ಕೊಡುವದು ನನಗ ಶಕ್ಯ ಅದ; ಅಂತಃ ಅದನ್ನ ಕೊಡೋದಕ್ಕಾಗಿ ಬಂದೆ. ನಿನಗ ತಾಯ್ಗರುಳಿನ ತಂಪನ್ನ ನೀಡುವದಕ್ಕಾಗಿ ಬಂದೆ!

(ಅಷ್ಟರಲ್ಲಿ ಒಮ್ಮೆಲೇ ವಸಂತ ಬರುತ್ತಾನೆ. ಇಂದಿರಾ-ಬಾಯಿಯ ಕಡೆಗೆ ಅವನ ಲಕ್ಷ್ಯ ಹೋಗುವದಿಲ್ಲ.)

ವಸಂತ:— ಉಷಾ, ನಮ್ಮ ಮದಿವಿಯ ತಯಾರಿ ಎಲ್ಲಾ ಆತ್ಯ, ಕೆಳಗ ಮೋಟರ್ ತಂದು ನಿಲ್ಲಿಸೀನಿ. ಹೊರಡೋದಿನ್ನ ವ್ಯಾಳ್ಯಾ ಇಲ್ಲ.

(ಇಂದಿರಾಬಾಯಿಯುವರನ್ನು ನೋಡಿ ಬೆದರಿದವನಾಗಿ)

ಇಂದಿರಾ:— (ಅವನನ್ನು ನೋಡಿದಂತೆ ತೋರಿಸದೆ) ಉಷಾ, ನಾ ಬರ್ತೀನಿ.

ಉಷಾ:— ಅವ್ವಾ ಹೋಗಬ್ಯಾಡ ನೀನು, ನಿಲ್ಲು! ನನ್ನ ಮನಸ್ಸು ಗೊಂದಲಗೆಟ್ಟಽದ, ಬುದ್ಧಿಗೆ ಯಾವದೂ ತೋಚದಂತಾಗೇದ.

ಇಂದಿರಾ:— ಉಷಾ, ಕಂಗೆಡಬ್ಯಾಡ. ನಿನಗ ಹ್ಯಾಂಗ ಒಳ್ಳೇದನಸ್ತದ ಹಾಂಗ ಮಾಡು. ನಿನಗ ನಿನ್ನ ತವರಮನಿ ಯಾವಾಗಲೂ ತೆರವದ ನನ್ನ ಮಗಳ.

ಉಷಾ:— ಅವ್ವಾ, ಹೋಗಬ್ಯಾಡ. ನಿನ್ನ ಜತಿಗೆ ನನಗ ಬಹಳ ಮಾತಾಡೋದದವ್ವಾ. ನೀ ಒಳಗ ಕೂಡು.

(ಉಷೆಗೆ ದುಃಖ ತಡೆಯಲಾರದೆ ಬಿಕ್ಕಿ ಅಳಹತ್ತುವಳು.)

ಇಂದಿರಾ:— ಒಳಗ ಕೂಡಲಿ? ಆಗಲವ್ವಾ (ಹೋಗುವಳು.)

ವಸಂತ:— ಉಷಾ, ಏನಿದು? ಅಳೋದ್ಯಾಕ?

ಉಷಾ:— (ಅಳು ತಡೆಯಲು ತುಂಬ ಪ್ರಯತ್ನಮಾಡುತ್ತ) ಹೌದು, ಪ್ರಸಂಗ ಹಾಂಗಽ ಅದ.

ವಸಂತ :— ಉಷಾ, ಎಲ್ಲಾ ಪ್ರಸಂಗದ್ದೂ ನಾವು ಮೊದಲೇ ವಿಚಾರ ಮಾಡಿದ್ದೆವಲ್ಲ ?

ಉಷಾ :— ಯುದ್ಧಕ್ಕೆ ಮೊದಲು ಮಾಡಿದ ಯೋಜನೆಗಳನ್ನ ಯುದ್ಧ-ಪ್ರಾರಂಭ ಆದಮ್ಯಾಲ ಬದಲಿಸಬೇಕಾಗ್ತದ, ವಸಂತ!

ವಸಂತ :— ಉಷಾ, ಈ ಮಾತು ನನಗ ತಿಳಿಯೋದಿಲ್ಲ, ಮತ್ತ ತಿಳ-ಕೊಳ್ಳೋ ಮನಸ್ಸೂ ಇಲ್ಲ. ನೀನು ನನಗ ಲಗ್ನದ ವಚನ ಕೊಟ್ಟೀ. ನಮ್ಮ ಪ್ರೇಮ ಅಂದರ ಸುಳಿಗಾಳಿಗೆ ಸೋಂಕಿ, ಉಫ್ ಅಂದ ಕೂಡಲೆ ರವದೀಹಾಂಗ ಹಾರಿಹೋಗುವ ವಿಚಾರ ಅಲ್ಲ, ಉಷಾ !

ಉಷಾ :— ವಸಂತ, ನಾನು ನಿನ್ನ ಮ್ಯಾಲ ಪ್ರೇಮ ಮಾಡಿದೆ. ಅಪಾರ ವಾಗಿ ಪ್ರೇಮ ಮಾಡಿದೆ. ಆದರ ಇಂದಿನ ಮಟ್ಟಿಗಂತೂ ನನ್ನ ಮನಸ್ಸು ತೀರ ಕಂಗೆಟ್ಟದ! ಕ್ಷಮಿಸು ವಸಂತ. ಕನಿಷ್ಟ ಇವತ್ತಾದರೂ ನೀನು ನನಗ ಮದಿವಿಯ ಆಗ್ರಹ ಮಾಡ ಬ್ಯಾಡ.

ವಸಂತ :— ಛೆ, ಛೆ, ಉಷಾ, ಹೊರಗ ಗಾಡಿ ಬಂದು ನಿಂತsದ. ಒಂದು ಕ್ಷಣ ಕೂಡ ನಾವು ತಡಮಾಡೋ ಹಾಂಗಿಲ್ಲ. ನಾವು ಈಗ ಹೊರಡಲೇಬೇಕು.

ಉಷಾ :— (ನಿಶ್ಚಯದ ದನಿಯಲ್ಲಿ) ಅದನ್ನ ನಾ ಮಾಡಲಾರೆ ವಸಂತ.

ವಸಂತ :— ಮಾಡಲಾರಿ? ಉಷಾ, ನಿನಗ ಹುಚ್ಚುಗಿಚ್ಚು ಹಿಡಿದಿಲ್ಲಲ್ಲ ?

ಉಷಾ :— ಹಾಂಗೂ ಅನ್ನು ಬೇಕಾದರ !

ವಸಂತ :— ಉಷಾ, ಹೀಂಗ ನೀನು ಧೈರ್ಯಗೆಡಲಿಕ್ಕೆ ಕಾರಣೇನು? ಇಷ್ಟು ದಿನ ನಾ ದುರ್ಬಲನಾಗಿದ್ದೆ, ನೀನು ಸಮರ್ಥ ಳಾಗಿದ್ದಿ. ನಿನ್ನ ಖಂಬೀರ ಮನಸ್ಸಿನ ಬೆಂಬಲದ ಮ್ಯಾಲ ನಾನು ನನ್ನ ನಿಶ್ಚಯವನ್ನ ಚಲಿಸಗೊಟ್ಟಿರಲಿಲ್ಲ. ಆದರ, ಇಂದು ನನಗ ತುಂಬ ಧೈರ್ಯ ಬಂದದ, ನೀನು ಮಾತ್ರ....

ಉಷಾ :— ಹೌದು, ನನ್ನ ಧೈರ್ಯ ಹೋಗೇದ. ನಾನು ಹೌಹಾರೀನಿ.

ವಸಂತ :— ಹಿಂಗ ಹುಚ್ಚೀಹಾಂಗೇನು ಮಾಡ್ತಿ, ಉಷಾ? ಇಷ್ಟು ದೂರ ಮಾತು ಮುಂದರಿದಮ್ಯಾಲ, ಈಗ ನಾವು ನಮ್ಮ ಲಗ್ನ ಮುಂದ ನೂಕೋದು ಅಂದರ ನಮ್ಮ ಫಜೀತಿಗೆ ಪಾರವೇ ಉಳಿಯಲಿಕ್ಕಿಲ್ಲ. ಉಷಾ, ಕಿಶೋರಿಯ ಸಂಸಾರವನ್ನ ಮಣ್ಣುಗೂಡಿಸಿದ ನರಾಧಮ ಅಂತ ಈಗಾಗಲೆ ಊರೊಳಗೆಲ್ಲ ನನ್ನ ಅಪ್ರತಿಷ್ಠಾ ಆಗಿದ್ದದ. ಅದರ ಜತೀಗೆ ಒಬ್ಬ ಕುಮಾರಿಯ ವಿಶ್ವಾಸಘಾತ ಮಾಡಿದ ನರರಾಕ್ಷಸ ಅಂಬೋ ಕೆಟ್ಟ ಹೆಸರೂ ನನ್ನ ಪಾಲಿಗೆ ಬಂದೀತು! ಛೆ, ಎಂದಿಗೂ ಅದನ್ನ ಮಾಡಗೊಡುವ ಹಾಂಗಿಲ್ಲ. ನಿನ್ನೆ ಚೈತನ್ಯರೂ ಆಗ್ರಹ ಮಾಡಿ ಹೇಳಿದರು, ಕೂಡಲೆ ನಾವು ನಮ್ಮ ಮದಿವಿಯನ್ನ ಮುಗಿಸಿಬಿಡಬೇಕು ಅಂತ.

ಉಷಾ :— ಏನಾದರೂ ಇಂದ ನಾ ಮದಿವಿಗೆ ಸಿದ್ಧಾಗಲಾರೆ. ವಸಂತ, ನನ್ನನ್ನು ನೀನು ಒತ್ತಾಯಪಡಿಸಬ್ಯಾಡ. ನನ್ನ ಮ್ಯಾಲ ನಿನಗ ಖರೆ ಪ್ರೇಮಿದ್ದರ, ಅದೇ ಪ್ರೇಮುದ್ದಃ ನಿನಗ ಆಣಿ ಅದ, ನನಗ ಅವಕಾಶ ಕೊಡು. ಇಷ್ಟೊಂದು ನನ್ನ ಮಾತು ನಡಸು.

ವಸಂತ :— (ಅವಳ ಬೇಡಿಕೆಗೆ ಮನಕರಗಿ) ಅವಕಾಶ ಅಂದರ ಎಷ್ಟು? ಒಂದು ದಿವಸ?

ಉಷಾ :— ಸಾಕು, ಆದರ ನನ್ನಮಟ್ಟಿಗೆ ನನ್ನನ್ನ ಬಿಡು.

ವಸಂತ :— ಉಷಾ, ನಿನ್ನ ಮನಸ್ಥಿತಿಯನ್ನ ನಾ ನೋಡಲಾರೆ. ಹ್ಯಾಂಗೋ ಈಗ ನಾ ಹೋಗ್ತಿನಿ. ಆದರ ನಾಳೆ ಮಾತ್ರ ಈ ಲಗ್ನಾಗದಃ ಇರಲಾರದು. ಬರ್ತಿನಿ ನಾನು. (ಹೋಗ ಹತ್ತುವನು.)

ಉಷಾ :— (ಒಮ್ಮೆಲೆ ಅವನ ಹಿಂದಿಂದೆ ಧಾವಿಸಿ ಹೋಗಿ) ವಸಂತ····

ವಸಂತ :— (ಹಿಂತಿರುಗಿ) ಏನಂತಿ, ಉಷಾ?

ಉಷಾ :— ಏನಿಲ್ಲ, ನೀನು ಹೋಗು. (ವಸಂತ ಹೋಗುತ್ತಾನೆ. ಉಷಾ ನಿಶ್ಚಲದೃಷ್ಟಿಯಿಂದ ಅವನು ಹೋದತ್ತ ಕ್ಷಣಹೊತ್ತು ನೋಡುತ್ತಾಳೆ.

ಅಮೇಲೆ) ಪ್ರೇಮದ ಜೀವ!....ವಸಂತ....ಇಂದಿನ ನಿನ್ನ ನಿರಾಶೆಯನ್ನ ನಾಳಿಗೆ ಮೂಡಿದೆ. ಆದರ ನನ್ನ ಜನ್ಮದ ಸುಖ....(ಒಮ್ಮೆಲೆ ನೆಲಕ್ಕೆ ಕುಸಿದು ಕುರ್ಚಿಗೆ ತಲೆಯನ್ನಾನಿಸಿ ಬಿಕ್ಕಳಿಸುವಳು. ಅವಳ ಹೆಗಲಮೇಲೆ ಕೈಯಿಟ್ಟು ಇಂದಿರಾಬಾಯಿ ಮೆಲ್ಲಗೆ)

ಇಂದಿರಾ:— ಇದೇನು ಉಷಾ? ವಸಂತರಾಯರೆಲ್ಲಿದ್ದಾರ?

ಉಷಾ:— ವಸಂತ ಹೋದ. ಅವನಿಗೆ ನಾ ತಿರುಗಿ ಹೋಗು ಅಂತ ಹೇಳಿದೆ.

ಇಂದಿರಾ:— ಅಂದರ ನೀನು ವಸಂತರಾಯರ್ನ ತಿರುಗಿ ಕಳಿಸಿದಿ?

ಉಷಾ:— ಹೌದವಾ. ಪರರ ದುಃಖದ ಕಡಲಲ್ಲಿ ಸ್ವಸುಖ ಎಂದೂ ಬೇರು ಹಿಡಿಯಲಾರದು! ಸ್ವಸುಖ....ಸ್ವಸುಖ.... ಬ್ಯಾಡ ನನಗ ಆ ಸುಖ! ಎಂದೂ ಬ್ಯಾಡ!

ಇಂದಿರಾ:— (ಅವಳ ನಿಶ್ಚಯದ ಕಲ್ಪನೆ ಬಂದು) ಇದೇನು ಮಾತು, ಉಷಾ? ನಿನ್ನ ಸುಖಸರ್ವಸ್ವದ ಮೇಲೆ ತಿಲಾಂಜಲಿ ಕೊಡುವದನ್ನ ನಿರ್ಧರಿಸಿದಿ?

(ಉಷಾ ಕತ್ತನ್ನಲ್ಲಾಡಿಸಿ "ಹೌದು" ಎಂದು ಸೂಚಿಸುವಳು. ಇಂದಿರಾಬಾಯಿಗೂ ಶಿರ ಬಿಗಿದು ಮಾತನಾಡುವದಕ್ಕಾಗುವದಿಲ್ಲ. ಕೊನೆಗೆ ಅವರು)

ಇಂದಿರಾ:— ಎಷ್ಟು ದೊಡ್ಡವಳವ್ವಾ ನೀನು, ಉಷಾ!

ಉಷಾ:— ನಾನೋ—ಈ ಅಧಃಪಾತದಿಂದ ನನ್ನ ಉಳಿಸಿದ ನಂತಾಯಿ ನೀನೋ!

(ಒಮ್ಮೆಲೆ ಇಂದಿರಾಬಾಯಿಯ ಕೊರಳಿಗೆ ಅಪ್ಪಿಗೆ ಹಾಕುತ್ತಾಳೆ.)

ತೆರೆ

1352—54. ಬೆಂಗಳೂರು ಸಿಟಿ ಬೆಂಗಳೂರು ಪ್ರೆಸ್ಸಿನಲ್ಲಿ ಸೂಪರಿಂಟೆಂಡೆಂಟರವರಾದ ಸಿ. ವಾಸುದೇವರಾಯರವರು ಮುದ್ರಿಸಿರುವರು.

